# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಮಾನವರಿಗೆ ಸರ್ವಸಾಧಾರಣವಾಗಿರುವ ಆಲೋಚನೆ ಎಂದರೆ ಸ್ವಹಿತಕ್ಕೆ ಧಕ್ಕೆ ಬಾರದಂತೆ ನೋಡಿಕೊಳ್ಳುವುದೇ. ಈ ಬಗೆಯ ಸ್ವಾರ್ಥ ಮುಖ್ಯತೆ ಪಾಮರ ಜನರಿಗೆ ಮಾತ್ರವಲ್ಲ, ದೊಡ್ಡ ಪಂಡಿತರೊಳಗೂ ಹುದುಗಿರುವುದುಂಟು. ಆದರಿಂದ ವಿಶಾಲ ಮನೋಭಾವವು ಕುಗ್ಗಿ ಹೋಗಿ, ಪ್ರಾಮಾಣಿಕತೆ ಮಾಯವಾಗಿ ಇತರರನ್ನು ವಂಚಿಸುವಂತಾಗುತ್ತದೆ. ಆದರಿಂದ ಪ್ರತಿಭಾಶಾಲಿಗಳು ತಲೆಯೆತ್ತಲಾಗದೆ ಹೋಗುತ್ತಾರೆ. ಇದನ್ನು ಈ ಸಂಚಿಕೆಯಲ್ಲಿರುವ "ಪ್ರಜ್ಞಾ ಪ್ರದರ್ಶನ" ಎಂಬ ಕಥೆ ನಿರೂಪಿಸುತ್ತದೆ.

## ಅಮರವಾಣಿ

**ಶುನಕೋ ವೃಷಭೋ ನ ಸ್ಯಾತ್ ಮಶಕಶ್ಚ ಮಹಾಗಜಃ**
**ಶಶಕಸ್ತು ನ ಶಾರ್ದೂಲಃ ಲುಬ್ಧೋ ದಾತಾ ಕಥಂ ಭವೇತ್**

ನಾಯಿ ಎಂದಿಗೂ ವೃಷಭವಾಗದು, ಸೊಳ್ಳೆ ಆನೆಯೂ ಆಗದು : ಮೊಲವು ಹೆಬ್ಬುಲಿಯಾಗದು. ಹಾಗೆಯೇ ಲೋಭಿ ಎಂದಿಗೂ ದಾತನಾಗಲಾರನು.

ಸಂಪುಟ : ೩೬ ನವಂಬರ್ '೮೪ ಸಂಚಿಕೆ : ೫

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦



# ಚಂದಮಾಮನ ಹರಟೆ



## ನ್ಯಾಯಮೂರ್ತಿಯ ಆತ್ಮ ವಿಮರ್ಶೆ !

ನ್ಯೂ ಮೆಕ್ಸಿಕೋದಲ್ಲಿಯ ಕೋಂಟಾಷಿ ಕೋರ್ಟಿನ ಪ್ರಧಾನ ನ್ಯಾಯಮೂರ್ತಿ ಒಂದು ದಿನ ನ್ಯಾಯಾಸ್ಥಾನಕ್ಕೆ ಐದು ನಿಮಿಷ ತಡವಾಗಿ ಬಂದರು. ಹಾಗೆ ತಡವಾಗಿ ಬಂದುದಕ್ಕೆ ಅವರು ತನಗೆ ತಾನೇ ಐವತ್ತು ಡಾಲರುಗಳಷ್ಟು ಜುಲ್ಮಾನೆ ವಿಧಿಸಿಕೊಂಡರು.

## ಜಲಕನ್ಯೆಯರು ಇವೆಯೇ ?

ನ್ಯೂಗಿನೀಯ ಸಮುದ್ರ ತೀರವಾಸಿಗಳು, ಸಮುದ್ರದಲ್ಲಿ ಜಲ ಕನ್ಯೆಯರು, ಜಲ ಪುರುಷರು ಇರುವುದನ್ನು ನಂಬುತ್ತಾರೆ. ಮೇಲು ಭಾಗವು ಮಾನವಾಕೃತಿಯಾಗಿ, ಕೆಳಭಾಗವು ಮೀನಿನ ರೂಪವಾಗಿರುವ ಈ ವಿಚಿತ್ರ ಪ್ರಾಣಿಗಳನ್ನು ಅವರು 'ರಿ' ಎಂದು ಕರೆಯುತ್ತಾರೆ. ಅವುಗಳನ್ನು ಸ್ವತಃ ಕಂಡೆವೆಂದು ಹೇಳುವ ಅನೇಕರೊಂದಿಗೆ ಮಾತಾಡಿದ ಮೇಲೆ, ವರ್ಜೀನಿಯಾ ವಿಶ್ವವಿದ್ಯಾಲಯಕ್ಕೆ ಸೇರಿದ ರಾಯ್ ವಾಗ್ನರ್ ಎಂಬ ಮಾನವ ಶಾಸ್ತ್ರವೇತ್ತನು ಕೂಡಾ ಅವುಗಳನ್ನು ನಂಬಲು ತೊಡಗಿದನು.





## ಸೌರ ಶಕ್ತಿಯಿಂದ ಸೈಕಲ್ ರಿಕ್ಷಾ

ಸೌರ ಶಕ್ತಿಯನ್ನು ಸಂಪತ್ತಾಗಿ ಭಾವಿಸಿ, ಅದನ್ನು ಯಾವ ಯಾವ ವಿಧವಾಗಿ ಉಪಯೋಗಿಸಬಹುದೆಂಬ ವಿಷಯದ ಮೇಲೆ, ನಮ್ಮ ಭಾರತ ವಿಜ್ಞಾನವೇತ್ತರು ಅನೇಕ ಸಂಶೋಧನೆಗಳನ್ನೂ, ಪ್ರಯೋಗಗಳನ್ನೂ ಮಾಡುತ್ತಿದ್ದಾರೆ. ಅವುಗಳ ಫಲಿತವಾಗಿ ಸೌರ ಶಕ್ತಿಯಿಂದ ನಡೆಯುವ ಸೈಕಲ್ ರಿಕ್ಷಾವನ್ನು ರೂಪಿಸುವುದರಲ್ಲಿ ನಮ್ಮ ವಿಜ್ಞಾನವೇತ್ತರು ವಿಜಯ ಸಾಧಿಸಿದ್ದಾರೆ.

## ನಿಮಗೆ ಗೊತ್ತೇ?

೧. ಪ್ರಪಂಚದೊಳಗೆಲ್ಲಾ ಉದ್ದವಾದ ದ್ವಾರ ಮಾರ್ಗವಿರುವ ದೇವಾಲಯವು ಯಾವುದೆಂದು ನಿಮಗೆ ಗೊತ್ತೇ ?

೨. ನಮ್ಮ ದೇಶದಲ್ಲಿ ಕಲ್ಲಿನಿಂದ ಮಾಡಲ್ಪಟ್ಟ ದೊಡ್ಡ ನಂದಿ ವಿಗ್ರಹವು ಎಲ್ಲಿದೆ ?

೩. ನಿರ್ಮಾಣ ಕಾಲದಲ್ಲಿ ಒಬ್ಬ ಬಾಲನ ದುರ್ಮರಣಕ್ಕೆ ಸಂಬಂಧವಿರುವ ಭಾರತ ದೇಶದೊಳಗಿನ ಸುಪ್ರಸಿದ್ಧ ದೇವಾಲಯವು ಯಾವುದೆಂದು ನಿಮಗೆ ಗೊತ್ತೇ ?

೪. ಅರೇಬಿಯಾ ಸಮುದ್ರ ರಾಣಿಯಾಗಿ ಹೆಸರು ಪಡೆದ ರೇವು ಪಟ್ಟಣ ಯಾವುದೆಂದು ನಿಮಗೆ ಗೊತ್ತಿದೆಯೆ ?

(ಉತ್ತರ ೬೪ ನೇ ಪುಟದಲ್ಲಿ)



# ಪ್ರಜ್ಞಾ ಪ್ರದರ್ಶನ

**ಹಿಂದೆ** ಪ್ಲವಂಗ ರಾಜ್ಯವನ್ನು ಆಳಿಕೊಂಡಿದ್ದ ಲಲಿತ ಸೇನರಾಜನು ದೊಡ್ಡ ಕವಿಪೋಷಕನೆಂದು ಹೆಸರು ಪಡೆದಿದ್ದನು. ಅವನ ಆಸ್ಥಾನದಲ್ಲಿ ಪಂಚರತ್ನ ಗಳೆಂದು ಹೆಸರು ಪಡೆದ ಐದು ಮಂದಿ ಕವಿಗಳು ಬೆಳಗುತ್ತಿದ್ದರು. ಆ ಪಂಚರತ್ನ ಕವಿಗಳ ಮೇಲೆ ರಾಜನಿಗೆ ವಿಶ್ವಾಸವೂ, ಗೌರವವೂ, ಅಭಿಮಾನವೂ ಎಷ್ಟರಮಟ್ಟಿಗೆ ಇತ್ತೆಂದರೆ, ತನ್ನ ದರ್ಶನಕ್ಕೆ ಬರುವ ಯಾವ ಕವಿಗಳೇ ಆಗಲಿ, ಮೊದಲು ಪಂಚರತ್ನ ಕವಿಗಳನ್ನು ದರ್ಶಿಸಿ ಅವರನ್ನು ಮೆಚ್ಚಿಸಿ ತನ್ನ ಮುಂದೆ ಬರಬೇಕೆಂಬ ನಿಯಮವನ್ನೇ ಏರ್ಪಡಿಸಿದ್ದನು ಲಲಿತ ಸೇನರಾಜ.

ಒಂದು ದಿನ ಸಾಯಂಕಾಲ ಲಲಿತ ಸೇನನು ಉದ್ಯಾನದಲ್ಲಿ ಗಾಳಿ ಸೇವನೆಗಾಗಿ ವಿಹರಿಸುತ್ತ, ತನ್ನೊಂದಿಗಿದ್ದ ಮಂತ್ರಿಯೊಂದಿಗೆ ಏನೋ ರಾಜ ಕಾರ್ಯವನ್ನು ಕುರಿತು ಮಾತಾಡಿಕೊಂಡಿದ್ದನು. ಆ ಸಮಯದಲ್ಲಿ ಪಂಚರತ್ನ ಕವಿಗಳ ಅನುಮತಿಯನ್ನು ಪಡೆದು ಇಬ್ಬರು ಕವಿಗಳು ರಾಜನನ್ನು ನೋಡಲು ಬಂದರು. ತಾವಿಬ್ಬರೂ ಪಂಚರತ್ನ ಕವಿಗಳನ್ನು ಮೆಚ್ಚಿಸಿದ್ದೇವೆಂದೂ ಹೇಳಿದರು.

ಆಮೇಲೆ ರಾಜನ ಅನುಜ್ಞೆಯಿಂದ ಕವಿಗಳು ರಾಜನನ್ನೂ, ಅವನ ರಾಜ್ಯಭಾರದ ಕ್ರಮವನ್ನೂ ಶ್ಲಾಘಿಸಿ ಒಂದೊಂದು ಆಶುಕವಿತ್ವವನ್ನು ಹಾಡಿ, ತಾವು ರಚಿಸಿದ ಮತ್ತೆರಡು ಬೇರೆ ಬಗೆಯ ಕವನ ಗಳನ್ನೂ ರಾಜನ ಮುಂದೆ ಹಾಡಿ ತೋರಿಸಿದರು.

ಲಲಿತ ಸೇನನು ಅಸಹನೆಯಿಂದ ಆ ಕವಿಗಳನ್ನು ನೋಡಿ, ಪಕ್ಕದಲ್ಲಿದ್ದ ಸೇವಕನೊಂದಿಗೆ, ಆ ಕವಿ ಗಳಿಬ್ಬರಿಗೂ ತಲಾ ಐವತ್ತು ವರಹ ಬಹುಮಾನ ಕೊಡಿಸಿ ಕಳುಹಿಸುವಂತೆ ಹೇಳಿದನು.

ಸೇವಕನು ಆ ಕವಿಗಳನ್ನು ಕರೆದುಕೊಂಡು ಹೋದ ಮೇಲೆ, ಲಲಿತ ಸೇನನು ಮಂತ್ರಿಯೊಂದಿಗೆ, " ಈಗ ಬಂದ ಈ ಕವಿಗಳ ಕವಿತ್ವಗಳನ್ನು ಕೇಳಿದ ಮೇಲೆ ರಾಜ್ಯದಲ್ಲಿ ಕವಿತ್ವವು ಎಷ್ಟು ಕೀಳ್ಮಟ್ಟಕ್ಕೆ ಇಳಿದಿದೆ ಎಂಬುದನ್ನು ಊಹಿಸಬಹುದು. ಆದರೆ ಪಾಪದವರನ್ನು ಬರಿಗೈಯಲ್ಲಿ ಕಳುಹಿಸಲು ಮನಸ್ಸು ಬರಲಿಲ್ಲ " ಎಂದನು.

ರಾಜನ ಮಾತುಗಳನ್ನು ಕೇಳಿ ಮಂತ್ರಿ ಮುಕುಂದ ವರ್ಮನು, ಹೌದು ಅಲ್ಲ ಎಂದೇನೂ ಹೇಳದೆ, ತಲೆಯಾಡಿಸಿ ಸುಮ್ಮನಾದನು.

ಜಿ. ರತ್ನ



ಸ್ವಲ್ಪ ಹೊತ್ತು ತಾಳಿ ಲಲಿತ ಸೇನನು, "ಘಂಟ ಪತ್ರ ಹಿಡಿಯಲು ಕಲಿತ ಪ್ರತಿಯೊಬ್ಬನೂ ತಾನು ದೊಡ್ಡ ಕವಿಯೆಂಬ ದುರಹಂಕಾರದಿಂದ ಬಾಯಿಗೆ ಬಂದುದನ್ನು ಬರೆದು ಬಿಡುತ್ತಾನೆ. ಆಸ್ಥಾನದ ಯೋಗ್ಯತೆಗೆ ತಕ್ಕ ಹಾಗಿನ ಪ್ರತಿಭೆಯುಳ್ಳವರನ್ನು ನನ್ನ ಹತ್ತಿರ ಕಳುಹಿಸಬೇಕೆಂದು ಪಂಚರತ್ನ ಕವಿಗಳಿಗೆ ಹೇಳಿದ್ದೆ" ಎಂದನು ಬೇಸರದಿಂದ.

"ಹೌದು. ಈ ಸಂಗತಿ ರಾಜ್ಯದಲ್ಲಿ ಎಲ್ಲರಿಗೂ ಗೊತ್ತಿದೆ ಮಹಾರಾಜರೇ, ಆದರೂ ಪಂಚರತ್ನ ಕವಿಗಳು ಇಂಥವರನ್ನೆಲ್ಲ ತಮ್ಮ ಬಳಿಗೆ ಏಕೆ ಕಳುಹಿಸುತ್ತಾರೋ, ಅವರಿಗೇ ಗೊತ್ತು" ಎಂದನು ಮಂತ್ರಿ ತಗ್ಗಿದ ಸ್ವರದಲ್ಲಿ.

ಮಂತ್ರಿಯ ಮಾತಿನ ಹಿಂದೆ ಏನೋ ಗೂಢಾರ್ಥವಿರುವಂತೆ ಲಲಿತ ಸೇನನಿಗೆ ತೋರಿತು. "ಅದಕ್ಕೆ ಕಾರಣವಿಷ್ಟೇ. ರಾಜನಿಂದ ಸನ್ಮಾನವು ಸಿಕ್ಕದ ಹಾಗೆ ತಾವು ತಡೆದೆವೆಂಬ ಅಪವಾದ ಬರಬಾರದೆಂದುಕೊಂಡು ಅಂಥವರನ್ನು ಕಳುಹಿಸುತ್ತಿರಬಹುದು. ಇದು ನಮ್ಮ ಪಂಚರತ್ನ ಕವಿಗಳ ನಿಷ್ಪಕ್ಷಪಾತ ಗುಣಕ್ಕೆ ನಿದರ್ಶನವಾದರೂ, ನನಗೇನೋ ಇದು ಕೋಪವನ್ನುಂಟುಮಾಡುತ್ತದೆ" ಎಂದನು ಲಲಿತ ಸೇನ.

ಮಂತ್ರಿ ಮುಕುಂದವರ್ಮನು ಸಣ್ಣಗೆ ನಗುತ್ತ, "ನಮ್ಮ ಪ್ಲವಂಗ ರಾಜ್ಯದಲ್ಲಿ ಪ್ರತಿಭಾವಂತ ಕವಿಗಳಿಗೆ ಕೊರತೆಯೇನೂ ಇರಲಾರದು. ಅವರೆಲ್ಲಾ ನಿಮ್ಮ ದರ್ಶನಕ್ಕೆ ಬರಲು ಸಾಧ್ಯವಾಗುವುದಿಲ್ಲ. ಅಷ್ಟೇ" ಎಂದನು.

ಲಲಿತ ಸೇನನು ಮುಕುಂದವರ್ಮನನ್ನು ಚುರು ಚುರು ನೋಡುತ್ತ, "ನೀವು ಪಂಚರತ್ನ ಕವಿಗಳ ಪ್ರಾಮಾಣಿಕತೆಯನ್ನು ಅನುಮಾನಿಸುವ ಹಾಗೆ ಕಾಣುತ್ತದೆ. ದೊಡ್ಡ ದೊಡ್ಡ ಕವಿಗಳನ್ನು ಅವರು ನನ್ನ ದರ್ಶನಕ್ಕೆ ಬರಲು ಬಿಡದೆ ತಡೆಯುವರೆಂದು ನಿಮ್ಮ ಅಭಿಪ್ರಾಯವೆ ?" ಎಂದು ಪ್ರಶ್ನೆಮಾಡಿದನು.

"ಈ ಪ್ರಶ್ನೆಗೆ ಸರಿಯಾದ ಉತ್ತರ ಇನ್ನೂ ನನಗೆ ಗೊತ್ತಾಗಲಿಲ್ಲ. ನೋಡಬೇಕು" ಎಂದು ಹೇಳಿ ಮುಕುಂದವರ್ಮನು ಸುಮ್ಮನಾದರು.

ಮುಂದೆ ಕೆಲವು ದಿನಗಳ ಮೇಲೆ ವಿಶಾಖನೆಂಬ ಕವಿ ಮಹಾರಾಜನ ದರ್ಶನಕ್ಕೆ ಬಂದನು. ಅವನು ಬರೆದ ಕಾವ್ಯದಿಂದ ಕೆಲವು ಅಂಶಗಳನ್ನು ರಾಜನ ಮುಂದೆ ಓದಿ ತೋರಿಸಿದನು.

ಲಲಿತ ಸೇನ ರಾಜನು ವಿಶಾಖ ಕವಿಯ ಪ್ರತಿಭೆಗೆ ಮುಗ್ಧನಾಗಿ, "ಬಹಳ ಚೆನ್ನಾಗಿದೆ. ಕವಿತೆ ಎಂದರೆ ಇದೇ, ನೀವು ನಿಜಕ್ಕೂ ಮಹಾ ಕವಿಗಳ ಸಾಲಿಗೆ ಸೇರುವವರು. ನಿಮ್ಮ ಪರಿಚಯವಾಗಲು ಇಷ್ಟು ಕಾಲವಾದುದೊಂದು ನನ್ನ ದುರದೃಷ್ಟವೇ !" ಎಂದು ಹೇಳಿ, ಪಕ್ಕದಲ್ಲಿದ್ದ ಮಂತ್ರಿಯೊಂದಿಗೆ, "ನೋಡಿದಿರಾ, ನಮ್ಮ ಪಂಚರತ್ನ ಕವಿಗಳು ಪ್ರಜ್ಞಾವಂತರಾದ ಕವಿಗಳಿಗೆ ರಾಜದರ್ಶನ ಲಭಿಸದಂತೆ

ಮಾಡುವವರೆಂದು ನೀವು ಅನುಮಾನಿಸಿದ್ದೀರಲ್ಲವೆ? ಅದು ನಿಜವಾಗಿರುತ್ತಿದ್ದರೆ ಈ ವಿಶಾಖರಂತಹ ದೊಡ್ಡ ಕವಿಗಳು ಇಷ್ಟು ಸುಲಭವಾಗಿ ನನ್ನ ದರ್ಶನಕ್ಕೆ ಬರುತ್ತಿದ್ದರೆ?" ಎಂದು ಕೇಳಿದನು.

ಮಂತ್ರಿ ವಿಶಾಖನ ಕಡೆಗೆ ನೋಡಿದನು. ಆಗ ವಿಶಾಖನು ರಾಜನನ್ನು ನೋಡಿ, "ಮಹಾರಾಜರೇ, ನಾನು ಪ್ರತಿಭಾವಂತನಾದ ಕವಿಯೆಂಬ ಸಂಗತಿ ಪಂಚರತ್ನ ಕವಿಗಳಿಗೆ ಗೊತ್ತಿಲ್ಲ. ಈ ವಿಷಯದಲ್ಲಿ ನನಗೆ ತುಂಬಾ ಸಹಾಯ ಮಾಡಿದ ಮಂತ್ರಿಯವರಿಗೆ ನಾನು ತುಂಬಾ ಕೃತಜ್ಞನು. ಆದರೆ ನಾನು ಪಂಚರತ್ನ ಕವಿಗಳನ್ನು ಮೀರಿ, ಅಂದರೆ ತಮ್ಮ ನಿಯಮವನ್ನು ಉಲ್ಲಂಘಿಸಿ ತಮ್ಮ ದರ್ಶನಕ್ಕೆ ಬಂದವನೂ ಅಲ್ಲ" ಎಂದನು.

ಲಲಿತ ಸೇನನು ಆಶ್ಚರ್ಯದಿಂದ ಮಂತ್ರಿಯ ಮುಖವನ್ನು ನೋಡಿದನು. ಆಗ ಮಂತ್ರಿ ವಿನಯದಿಂದ, "ಪ್ರಭೂ, ಕವಿಗಳ ಪ್ರತಿಭೆಯನ್ನು ಕುರಿತು ತಿಳಿದು ತಕ್ಕ ವಿಧದಲ್ಲಿ ಸನ್ಮಾನಿಸುವವರು ನೀವು. ಹಾಗಿರುವಾಗ ತನಗಿರುವ ಪ್ರಜ್ಞೆಯನ್ನೆಲ್ಲಾ ಪಂಚರತ್ನ ಕವಿಗಳ ಮುಂದೆ ಪ್ರದರ್ಶಿಸಬೇಕಾದ ಅಗತ್ಯವೇನಿದೆ? ಎಂಬ ಶಂಕೆ ನಮ್ಮ ರಾಜ್ಯದಲ್ಲಿರುವ ಅನೇಕ ಮಂದಿ ದೊಡ್ಡ ದೊಡ್ಡ ಕವಿಗಳಿಗೆ ಬಂದ ಹಾಗೆ ಕಾಣಲಿಲ್ಲ. ಅವರು ಮೊದಲು ಪಂಚರತ್ನ ಕವಿಗಳನ್ನು ದರ್ಶಿಸುವುದೂ, ಪಂಚರತ್ನ ಕವಿಗಳು ಅವರು ತಮಗಿಂತ ಹೆಚ್ಚಿನವರೆಂದು ಗೊತ್ತಾದಾಗ ಏನೋ ಒಂದು ಕೊರತೆ ಹೇಳಿ ಅವರಿಗೆ ರಾಜದರ್ಶನ ಭಾಗ್ಯ ಲಭಿಸದಂತೆ ಮಾಡುವುದೂ ನಡೆಯುತಿತ್ತು. ಇದು ನನಗೆ ಗೊತ್ತಿದ್ದರೂ, ತಮ್ಮೊಡನೆ ಹೇಳಲು ಕಾಲವನ್ನು ನಿರೀಕ್ಷಿಸಿಕೊಂಡಿದ್ದೆ" ಎಂದನು.

"ಎಲಯೆಲಾ? ಹಾಗಾಗುತ್ತಿತ್ತೇ?" ಎಂದನು ಲಲಿತ ಸೇನ ರಾಜ ಆಶ್ಚರ್ಯದಿಂದ.

ಮಂತ್ರಿ ರಾಜನಿಗೆ ವಿಶಾಖನನ್ನು ತೋರಿಸಿ. "ಇವರು ಮಹಾ ಕವಿ ಎಂಬುದನ್ನು ತಾವು ಗುರುತಿಸಿದಿರಷ್ಟೆ? ಇವರ ವಿಷಯದಲ್ಲಿ ಏನು ನಡೆಯಿತೆಂದರೆ, ಈ ನಡುವೆ ವಿಕೀರ್ಣನೆಂಬ



ಪಂಡಿತನು ಇವರನ್ನು ತನ್ನ ಶಿಷ್ಯನೆಂದು ನನಗೆ ಪರಿಚಯ ಮಾಡಿಸಿದನು. ಮಹಾರಾಜರ ಆಸ್ಥಾನದಲ್ಲಿ ಶಾಶ್ವತವಾಗಿರತಕ್ಕ ಮಹಾ ಕವಿ ಇವನೆಂತಲೂ ನನಗೆ ಹೇಳಿದನು. ಪಂಚರತ್ನ ಕವಿಗಳ ಸಂಪರ್ಕವಿಲ್ಲದೆ ಇವರಿಗೆ ರಾಜದರ್ಶನ ಮಾಡಿಸಬೇಕೆಂದೂ ನನ್ನನ್ನು ಕೇಳಿಕೊಂಡನು. ನಿಮ್ಮ ಆಜ್ಞೆಯ ಕಾರಣದಿಂದ ಹಾಗೆ ಸಾಧ್ಯವಿಲ್ಲವೆಂದು ನಾನು ಆ ಪಂಡಿತನೊಂದಿಗೆ ಹೇಳಬೇಕಾಯಿತು" ಎಂದನು.

"ಹಾಗಾದರೆ ಈ ವಿಶಾಖರು ಪಂಚರತ್ನ ಕವಿಗಳನ್ನು ನೋಡಿ, ಅನುಮತಿ ಪಡೆಯದೆ ನನ್ನ ಬಳಿಗೆ ಬಂದವರೆಂದಾಯಿತು! ಅಲ್ಲವೆ?" ಎಂದು ಕುತೂಹಲದಿಂದ ಕೇಳಿದನು ರಾಜ.

ಕೂಡಲೇ ವಿಶಾಖನು "ಇಲ್ಲ ಮಹಾರಾಜಾ, ನಾನು ಪಂಚರತ್ನ ಕವಿಗಳ ದರ್ಶನ ಮಾಡಿ, ಅವರ ಅನುಮತಿಯಿಂದಲೇ ಬಂದಿದ್ದೇನೆ. ಆದರೆ ನನ್ನ ಕವಿತಾ ಪ್ರಜ್ಞೆಯನ್ನು ಸರಿಯಾಗಿ ಪ್ರದರ್ಶನ ಮಾಡಲಿಲ್ಲ, ಅಷ್ಟೇ. ನಾನು ಅಭ್ಯಾಸ ಕಾಲದಲ್ಲಿ ರಚಿಸಿದ ಎರಡು ಸಾಧಾರಣ ಕವಿತೆಗಳನ್ನಷ್ಟೇ ಅವರ ಮುಂದೆ ಹೇಳಿದೆ. ಪೂರ್ತಿ ಪ್ರಜ್ಞೆ ತೋರಿಸಿಬಿಟ್ಟರೆ ನಿಮ್ಮ ದರ್ಶನ ಭಾಗ್ಯವು ಸಿಗಲಾರದೆಂದು ಇತರ ಕವಿಗಳ ಅನುಭವದ ಮೂಲಕ ನಾನು ತಿಳಿದಿದ್ದೆ. ಅದಕ್ಕೇ ನಾನೊಬ್ಬ ಸಾಮಾನ್ಯ ಕವಿಯ ಹಾಗೆ ಅವರ ಮುಂದೆ ಪ್ರವರ್ತಿಸಿದೆ. ಕೂಡಲೇ ತಮ್ಮ ದರ್ಶನಕ್ಕೆ ಅವರಿಂದ ಅನುಜ್ಞೆ ಸಿಕ್ಕಿತು" ಎಂದು ರಾಜನಿಗೆ ವಿನಯದಿಂದ ಹೇಳಿದನು.

ರಾಜನು ಬಹಳ ಕೋಪದಿಂದ, "ನಮ್ಮ ಪಂಚರತ್ನ ಕವಿಗಳ ದೊಡ್ಡ ಪ್ರತಿಭೆಯನ್ನು ನಾನೇನೂ ಅಲ್ಲಗಳೆಯುವುದಿಲ್ಲ. ಆದರೆ ಅವರೊಳಗೆ ಇಂತಹ ಅಸೂಯೆ ಇರುವುದನ್ನು ನೆನೆಯುವಾಗ, ಎಲ್ಲಾ ಬಣ್ಣ ಮಸಿನುಂಗಿತು ಎಂಬ ಹಾಗೇ ಸರಿ. ರಾಜ್ಯದಲ್ಲಿ ತಮ್ಮನ್ನು ಮೀರಿಸುವ ಕವಿಗಳೇ ಇಲ್ಲವೆಂದು ನನ್ನನ್ನು ನಂಬಿಸಲು ನೋಡುತ್ತಾರೆಂದಾಯಿತು! ಛೀ ಛೀ!" ಎಂದನು.

"ನಿಜ ಪ್ರಭೂ! ಹಾಗೆಯೇ ಇದೆ ನಮ್ಮ ಪಂಚರತ್ನ ಕವಿಗಳ ಮನಸ್ಸು. ಮೊದಲೊಮ್ಮೆ ನಾವು ಉದ್ಯಾನದಲ್ಲಿರುವಾಗ ಸ್ವಲ್ಪವೂ ಕವಿತಾ ಶಕ್ತಿ ಇಲ್ಲದವರಿಬ್ಬರನ್ನು ನಿಮ್ಮ ಬಳಿಗೆ ಕಳುಹಿಸಿದರು. ಪ್ರಭುಗಳು ಮರೆತಿರಲಿಕ್ಕಿಲ್ಲ" ಎಂದನು ಮಂತ್ರಿ ಮುಕುಂದವರ್ಮ.

ಲಲಿತ ಸೇನನಿಗೆ ಪಂಚರತ್ನ ಕವಿಗಳ ನಿಜ ಸ್ವರೂಪ ಅರ್ಥವಾಯಿತು. ಅವನು ವಿಶಾಖನನ್ನು ಆಸ್ಥಾನ ಕವಿಯಾಗಿ ನಿಯಮಿಸಿ, ಎಲ್ಲರೂ ತನ್ನ ದರ್ಶನಕ್ಕೆ ಬರಬಹುದೆಂದು ಸಾರುವಂತೆ, ಮೊದಲಿದ್ದ ನಿಯಮವನ್ನು ತೆಗೆದು ಹಾಕಿದನು.





# ಕಲಿಯುವಿಕೆ

ತಾನು ತೊಟ್ಟ ಕಾರ್ಯವೊಂದು, ಬೇತಾಳದ ಓಟ ಇನ್ನೊಂದು ಇವೆರಡು ಮಹಾ ಸಾಹಸಗಳಿಗೂ ಸಿದ್ಧನಾದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೆ ಹೇರಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಹುದುಗಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, " ಎಲೌ ಮಹಾರಾಜನೇ, ಇಷ್ಟೊಂದು ರಾತ್ರಿಯ ಹೊತ್ತಿನಲ್ಲಿ ಈ ಭಯಂಕರ ಸ್ಮಶಾನದಲ್ಲಿ ನೀನು ಏನನ್ನು ಸಾಧಿಸಬೇಕೆಂದು ಇಂತಹ ಕಷ್ಟಗಳನ್ನು ಸಹಿಸಿಕೊಳ್ಳುವೆಯೋ ನನಗಂತೂ ತಿಳಿಯದು. ನಿನ್ನ ಹಾಗೆ ಅನೇಕ ಮಂದಿ ಮನುಷ್ಯರಲ್ಲಿ ಹಟವೂ, ಕಷ್ಟ ಸಹಿಷ್ಣುತೆಯೂ ಇರುತ್ತದೆಂಬುದೇನೋ ನಿಜವೇ. ಅವರು ಅದನ್ನು ಸಕ್ರಮವಾಗಿ ಉಪಯೋಗಿಸಲು ತಿಳಿಯದೆ ಎಷ್ಟೆಷ್ಟೋ ಕಷ್ಟನಷ್ಟಗಳಿಗೆ ಗುರಿಯಾಗುತ್ತಾರೆ. ನೀನೂ ಅಂಥವರಲ್ಲಿ ಒಬ್ಬನಾಗಿರಬಹುದೇ ಅನಿಸುತ್ತದೆ. ಇದಕ್ಕೆ ಉದಾಹರಣೆಯಾಗಿ ಒಂದು ಕಥೆ ಹೇಳುತ್ತೇನೆ, ಕೇಳು. ನಡೆಯುವಾಗ ಶ್ರಮವೇ

ಬೇತಾಳ ಕಥೆಗಳು



ಗೊತ್ತಾಗಲಾರದು" ಎಂದು ಪೀಠಿಕೆ ಹೇಳಿ ಕಥೆಯನ್ನು ಹೇಳಲು ಪ್ರಾರಂಭ ಮಾಡಿತು:

ಗಂಗರಾಜನೆಂಬೊಬ್ಬ ಸ್ಥಿತಿವಂತನಾದ ರೈತನಿದ್ದನು. ಅವನಿಗೆ ಸುಶಾಂತನೆಂಬವನು ಒಬ್ಬನೇ ಒಬ್ಬ ಮಗ. ಗಂಗರಾಜನು ದೊಡ್ಡ ಆಸ್ತಿವಂತನಾದುದರಿಂದ, ತನ್ನ ಮಗನಿಗೆ ಚೆನ್ನಾಗಿ ವಿದ್ಯೆ ಕಲಿಸಿ, ಎಲ್ಲಾ ವಿದ್ಯೆಗಳಲ್ಲಿಯೂ ಜಾಣನನ್ನಾಗಿ ಮಾಡಬೇಕೆಂದು ಅವನ ಆಸೆಯಾಗಿತ್ತು. ಆದರೆ ಪಾಪ, ಮಗ ಸುಶಾಂತನಿಗೆ ಐದನೆಯ ವಯಸ್ಸು ನಡೆಯುತ್ತಿದ್ದಾಗ ಗಂಗರಾಜನಿಗೆ ಯಾವುದೋ ಒಂದು ತಿಳಿಯದ ಕಾಯಿಲೆ ಅಂಟಿಕೊಂಡು ಮನುಷ್ಯನನ್ನು ಕರಗಿಸತೊಡಗಿತು. ಅಂದು ಮಲಗಿದವನು ಮಲಗಿದಲ್ಲೇ ಇದ್ದುಬಿಟ್ಟನು. ಯಾವ ಔಷಧದಿಂದಲೂ ರೋಗ ವಾಸಿಯಾಗಲಿಲ್ಲ. ಸುಶಾಂತನನ್ನು ತನ್ನ ಹತ್ತಿರವೇ ಇರಿಸಿಕೊಂಡು ಮನೆಯ ವ್ಯವಹಾರಗಳನ್ನೂ, ವ್ಯವಸಾಯದ ಆಗುಹೋಗುಗಳನ್ನೂ ಅವನಿಂದಲೇ ಮಾಡಿಸತೊಡಗಿದನು. ಆದರಿಂದ ಅವನಿಗೆ ಚಿಕ್ಕಂದಿನಿಂದಲೇ ಮನೆಯೊಳಗಿನ ವಿಷಯಗಳೂ, ವ್ಯವಸಾಯದ ಗತ್ತುಗಳೂ ತಿಳಿಯುತ್ತಾ ಬಂದುವು. ಮಗನಿಗೆ ಹದಿನೈದು ವರ್ಷದ ಬೆಳವಣಿಕೆ ಬಂದಾಗ, ಗಂಗರಾಜನು ರೋಗಿಷ್ಟನಾದರೂ ಮಗನು ಎಲ್ಲಾ ಕೆಲಸಗಳನ್ನೂ ನೋಡಿಕೊಳ್ಳುವಷ್ಟು ಸಮರ್ಥನಾದನು. ಆದರಿಂದ ಗಂಗರಾಜನಿಗೆ ಸಮಾಧಾನವಾಯಿತು.

ಸ್ವತಃ ಸುಶಾಂತನಿಗೆ ಕಲಿಯುವಿಕೆಯಲ್ಲಿ ಬಹಳ ಆಸಕ್ತಿ ಇದ್ದಿತು. ಆ ಊರಿನಲ್ಲಿರುವ ಉಪಾಧ್ಯಾಯನು ಹೆಚ್ಚು ಓದಿಕೊಂಡವನಾಗಿರಲಿಲ್ಲ. ತನ್ನ ಶಿಷ್ಯರಿಗೆ ಅಕ್ಷರಜ್ಞಾನ ಮಾತ್ರ ಚೆನ್ನಾಗಿ ಕಲಿಸಿಬಿಡುತ್ತಿದ್ದನು. ಆದರೆ ಸುಶಾಂತನು ಒಳ್ಳೆಯ ಗ್ರಹಣ ಶಕ್ತಿಯುಳ್ಳ ಹುಡುಗನಾದುದರಿಂದ, ಆ ಗುರುವಿನ ಹತ್ತಿರವೇ ಉಳಿದೆಲ್ಲ ಹುಡುಗರಿಗಿಂತಲೂ ಹೆಚ್ಚಾಗಿಯೇ ಕಲಿತುಕೊಂಡನು. ಅದೇ ಊರಿನಲ್ಲಿ ಶಕಾರನೆಂಬೊಬ್ಬ ಕವಿ ಇದ್ದನು. ಸುಶಾಂತನು ಆತನ ಬಳಿಗೆ ಹೋಗಿ, ಕಾವ್ಯವನ್ನು ಕುರಿತು ಕಲಿಯುತೊಡಗಿದನು. ಆಗ ಅವನಿಗೆ ಇನ್ನೆಷ್ಟೋ ವಿಷಯಗಳು ಅವಗತವಾದುವು. ಆಮೇಲೂ ಅನೇಕ ಹೊಸ ಹೊಸ ವಿಷಯಗಳನ್ನು ಇನ್ನೂ ಕಲಿಯಬೇಕೆಂದು ಇದ್ದರೂ ಅಲ್ಲೆಲ್ಲಿಯೂ ತಕ್ಕ ಅವಕಾಶ ಕಾಣಲಿಲ್ಲ.

ಸುಶಾಂತನಿಗೆ ಜಿಜ್ಞಾಸೆಯ ಬುದ್ಧಿ ಜಾಸ್ತಿ. ಪ್ರಕೃತಿಯಲ್ಲಿರುವ ವಿಶೇಷಗಳನ್ನು ಅವನು ಸೂಕ್ಷ್ಮವಾಗಿ ನೋಡುತ್ತ, ತನ್ನೊಳಗೇ ಪರಿಶೀಲಿಸಿಕೊಳ್ಳುತ್ತ, ಪ್ರತಿಯೊಂದು ಕಾರ್ಯಕ್ಕೂ ಕಾರಣವನ್ನು ಅನ್ವೇಷಿಸುತ್ತ, ವ್ಯವಸಾಯದಲ್ಲಿ ಹೊಸ ಹೊಸ ಪದ್ಧತಿಗಳನ್ನು ಪ್ರವೇಶಗೊಳಿಸಿದನು. ಅದರಿಂಧ ಒಳ್ಳೆಯದಾಗುವುದನ್ನು ನೋಡಿ, ಊರವರೆಲ್ಲ ಅವನ ಬುದ್ಧಿವಂತಿಕೆಯನ್ನು ಮೆಚ್ಚಿಕೊಳ್ಳತೊಡಗಿದರು. ಯಾರಿಗೆ ಯಾವ ಸಮಸ್ಯೆ ಬಂದರೂ ಚಿಕ್ಕವನೆಂದು ಅಲಕ್ಷ್ಯ ಮಾಡದೆ ಸುಶಾಂತನ ಬಳಿಗೆ ಬಂದು ಆಲೋಚನೆ

ಕೇಳುತ್ತಿದ್ದರು. ಅವನು ಮನಸ್ಸು ಕೊಟ್ಟು ಪರಿಶೀಲನೆ ಮಾಡಿ ತೃಪ್ತಿಕರವಾಗಿ ಉತ್ತರ ಹೇಳಿ ಅವರ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದನು.

ತಂದೆಗೆ ವರ್ಷಾಂತರಗಳಿಂದ ಗುಣವಾಗದಿರುವ ರೋಗವನ್ನು ಕುರಿತು ಸುಶಾಂತನು ಯಾವಾಗಲೂ ಆಲೋಚಿಸಿಕೊಂಡೇ ಇರುವನು. ಊರೊಳಗಿನ ವೈದ್ಯರೊಂದಿಗೆ ಮಾತಾಡಿ ಯಾವ ಯಾವ ವ್ಯಾಧಿ ಯಾವ ಯಾವ ಕಾರಣಗಳಿಂದ ಬರುತ್ತದೆಂಬುದನ್ನು, ಕೇಳಿ ಕೇಳಿ ತಿಳಿದುಕೊಳ್ಳುತ್ತಾ ಇದ್ದನು. ಆದರೆ ಅವನ ತಂದೆಗೆ ಮಾತ್ರ ಆ ವೈದ್ಯರ ಯಾವ ಮದ್ದೂ ಗುಣ ಕೊಡಲಿಲ್ಲ. ಹಾಗಾದರೆ ಮದ್ದಿನ ಸಂಬಂಧವಿಲ್ಲದ ಬೇರೆ ಯಾವುದೋ ಕಾರಣದಿಂದ ತಂದೆಯ ರೋಗವು ತಗ್ಗುವುದಿಲ್ಲವೆನಿಸಿತು.

ಸುಶಾಂತನಿಗೆ ಶರೀರ ಶಾಸ್ತ್ರವೂ ಸ್ವಲ್ಪಮಟ್ಟಿಗೆ ಅರ್ಥವಾಯಿತು. ಶರೀರಗಳೆಲ್ಲ ಒಂದೇ ವಿಧವಾದರೂ ಬೇರೆ ಬೇರೆ ಕಾರಣಗಳಿಂದ ಶರೀರಗಳ ವ್ಯತ್ಯಾಸಗಳನ್ನು ತೂಗಿ ನೋಡಿಕೊಂಡನು. ಆಗ ತಂದೆಯ ರೋಗಕ್ಕೆ ಕಾರಣವೇನೆಂದು ಅವನಿಗೆ ಸ್ಫುರಿಸಿತು. ಅವನು ತಂದೆಗೆ ಗೊತ್ತಾಗದಂತೆ ತಾಯಿಗೆ ಹೇಳಿ, ತಂದೆಗಾಗಿ ಪ್ರತ್ಯೇಕವಾಗಿ, ಅಡಿಗೆ ಮಾಡಿಸಿ ಹಾಕಿಸಿದನು. ಅದರ ಪ್ರಭಾವದಿಂದ ಮೂರು ತಿಂಗಳಲ್ಲಿ ಗಂಗರಾಜನು ಆರೋಗ್ಯ ಸುಧಾರಿಸಿದವನಾಗಿ ಓಡಾಡತೊಡಗಿದನು. ಆಗ ಸುಶಾಂತನು ತಂದೆಯೊಂದಿಗೆ ತಾನು ಮಾಡಿದ ವೈದ್ಯವನ್ನು ಕುರಿತು ಹೇಳಲು ಗಂಗರಾಜನು ಅತ್ಯಾಶ್ಚರ್ಯಪಟ್ಟು, ವೈದ್ಯನ ಅಭಿಪ್ರಾಯ ತಿಳಿಯಲು ಊರ ವೈದ್ಯನೊಂದಿಗೆ ನಡೆದ ಸಮಾಚಾರವನ್ನೆಲ್ಲಾ ಹೇಳಿದನು.

ಅದನ್ನು ಕೇಳಿ ವೈದ್ಯನು ಬೆರಗಾಗಿ, "ಬಹಳ ಒಳ್ಳೇದಾಯಿತು. ರಾಜಧಾನಿಯಲ್ಲಿ ನನ್ನ ಪರಿಚಯದ ಘನವೈದ್ಯನಿದ್ದಾನೆ. ಆತನು ಧನವಂತರಿಗೆಲ್ಲ ವೈದ್ಯ ಮಾಡುವವನು. ನಿಮ್ಮ ರೋಗವನ್ನು



ಕುರಿತು ಆತನ ಹತ್ತಿರ ಕೂಡಾ ಚರ್ಚೆ ಮಾಡಿದ್ದೇನೆ. ಆತನಿಗೂ ಅದರ ತಳ ಸಿಕ್ಕಿರಲಿಲ್ಲ. ನೀವು ಪುಣ್ಯವಂತರು, ನಿಮ್ಮ ಮಗನ ಬುದ್ಧಿ ಸಾಮಾನ್ಯವಾದುದಲ್ಲ. ವಜ್ರವೇ ಆದರೂ ಸಾಣೆ ಹಿಡಿಯಲೇಬೇಕಷ್ಟೆ ? ಅವನ ಪ್ರಭಾವವು ಕಮರಿ ಹೋಗುವಂತೆ ಬಿಡಬಾರದು. ನೀವು ನಿಮ್ಮ ಮಗನನ್ನು ಎಲ್ಲಿಗಾದರೂ ಕಳುಹಿಸಿ ಚೆನ್ನಾಗಿ ಓದಿಸಿರಿ. ಅದರಿಂದ ನಿಮಗೆ ಮಾತ್ರವಲ್ಲ, ಎಲ್ಲರಿಗೂ ಮೇಲಾಗುತ್ತದೆ" ಎಂದು ಸಲಹೆ ಮಾಡಿದನು.

ಗಂಗರಾಜನಿಗಂತೂ ಮಗನಿಗೆ ವಿದ್ಯೆಗಳನ್ನು ಕಲಿಸಬೇಕೆಂತಲೇ ಇತ್ತು. ವೈದ್ಯನ ಸಲಹೆಯಿಂದ ಅವನ ಉತ್ಸಾಹವು ಚೇತರಿಸಿತು. ಅವನು ಮಗನನ್ನು ಕರೆದುಕೊಂಡು ರಾಜಧಾನೀ ನಗರದ ಕಡೆಗೆ ಹೊರಟನು. ರಾಜಧಾನಿಯಲ್ಲಿ ದಿಲೀಪರೆಂಬುವರು ಸಕಲಶಾಸ್ತ್ರ ಪಾರಂಗತರಾಗಿ ಗುರುಕುಲವನ್ನು ನಡೆಸುತ್ತಿದ್ದರು. ಅವರ ಗುರುಕುಲದ ಹೆಸರು ಬಹಳ

ಪ್ರಸಿದ್ಧವಾಗಿತ್ತು. ಅವರ ಹತ್ತಿರವೇ ಸುಶಾಂತನನ್ನು ಸೇರಿಸಬೇಕೆಂಬುದು ಗಂಗರಾಜನ ಉದ್ದೇಶ.

ದಾರಿಯಲ್ಲಿ ತಂದೆ ಮಗಂದಿರು ಒಂದು ಗ್ರಾಮದಲ್ಲಿ ಸ್ವಲ್ಪ ತಂಗಿದರು. ಅಲ್ಲಿ ಗಂಗರಾಜನ ದೂರದ ಬಂಧುವೊಬ್ಬನಿದ್ದನು. ಅವನ ಮನೆಯಲ್ಲೇ ಅವರು ತಂಗಿದ್ದರು. ಆ ಬಂಧು ಸುಶಾಂತನನ್ನು ಸ್ವಲ್ಪ ಪರೀಕ್ಷೆ ಮಾಡಿ, "ನೋಡಿ ಗಂಗರಾಜರೇ, ನಿಮ್ಮ ಮಗನು ದೊಡ್ಡ ಕವಿಯಾಗುತ್ತಾನೆ. ನನ್ನ ಮಗ ಚಂದ್ರನು ದಿಲೀಪರ ಹತ್ತಿರ ಕವಿತ್ವವನ್ನು ಕಲಿಯುತ್ತಿದ್ದಾನೆ. ನೀವು ಮೊದಲು ಚಂದ್ರನ ಬಳಿಗೆ ಹೋಗಿ ಇವನ ಸಂಗತಿಯನ್ನು ಹೇಳಿರಿ. ಅವನು ನಿಮಗೆ ಸಹಾಯ ಮಾಡುತ್ತಾನೆ. ಏಕೆಂದರೆ ದಿಲೀಪರು ಎಲ್ಲರನ್ನೂ ಸೇರಿಸಿಕೊಳ್ಳುವುದಿಲ್ಲ. ಅದಕ್ಕಾಗಿ ಒಂದು ಪದ್ಧತಿಯನ್ನು ಇಟ್ಟಿರುತ್ತಾರೆ. ಅವರ ಶಿಷ್ಯರೇ ಮೊದಲು ಹೊಸಬನನ್ನು ಪರೀಕ್ಷಿಸಿ, ಉಪಯೋಗವಿರುವವನೆಂದು ಹೇಳಿದರೇನೇ ತಮ್ಮ ಗುರುಕುಲದಲ್ಲಿ ಸೇರಿಸಿಕೊಳ್ಳುತ್ತಾರೆ" ಎಂದನು.

ಗಂಗರಾಜನು ಅಲ್ಲಿಂದ ಹೊರಟು ಹೋಗುತ್ತಾ ದಾರಿಯಲ್ಲಿ ಮತ್ತೊಂದು ಗ್ರಾಮದಲ್ಲಿ ತಂಗಿದನು. ಅಲ್ಲಿ ಅವನು ತಂಗಿದುದು ಗ್ರಾಮಾಧಿಕಾರಿಯ ಮನೆಯಲ್ಲಿಯೇ. ಗ್ರಾಮಾಧಿಕಾರಿ ಸುಶಾಂತನ ವಿನಯ ವಿಧೇಯತೆಗಳನ್ನು ನೋಡಿ, ಬಹಳ ಮೆಚ್ಚಿಕೊಂಡು ಅನೇಕ ಪ್ರಶ್ನೆಗಳನ್ನು ಮಾಡಿದನು. ಕಡೆಗೆ ಗ್ರಾಮಾಧಿಕಾರಿ ಗಂಗರಾಜನೊಂದಿಗೆ, "ಸುಶಾಂತ ಒಳ್ಳೇ ಧೀರನಾಗಿದ್ದಾನೆ. ಇವನಿಗೆ ಯುದ್ಧ ವಿದ್ಯೆಯನ್ನೇ ಕಲಿಸಿರಿ - ಯಾವ ಗುರುವಿನ ಹತ್ತಿರವೂ ಕಲಿಯದೆಯೇ ಇವನು ಅನೇಕ ವ್ಯಾಯಾಮಗಳನ್ನು ಕಲಿತಿದ್ದಾನೆ. ಅವನ ಶರೀರವು ವೀರನಿಗೆ ತಕ್ಕಹಾಗೆ ತಿದ್ದಲ್ಪಟ್ಟಿದೆ. ರಾಜಧಾನಿಯಲ್ಲಿ ದಿಲೀಪರ ಗುರುಕುಲದಲ್ಲಿ ನನ್ನ ಚಿಕ್ಕ ತಮ್ಮ ವೀರಭದ್ರ ಯುದ್ಧ ವಿದ್ಯೆಯನ್ನು ಅಭ್ಯಾಸ ಮಾಡಿಕೊಂಡಿದ್ದಾನೆ. ನೀವು ಅವನ ಸಹಾಯ ತೆಗೆದುಕೊಳ್ಳಿರಿ" ಎಂದನು.

ಗಂಗರಾಜನು ಮತ್ತೆ ಅಲ್ಲಿಂದ ಪ್ರಯಾಣ ಮುಂದುವರಿಸಿದನು. ರಾಜಧಾನಿಗೆ ತಲಪುವುದ



ರೊಳಗೆ ಎರಡು ಮೂರು ಗ್ರಾಮಗಳಲ್ಲಿ ತಂಗಿದ್ದನು. ಅಲ್ಲಿಯವರೆಲ್ಲಾ ಸುಶಾಂತನ ವಿನಯ ವಿಧೇಯತೆಗಳಿಗೂ, ಬುದ್ಧಿವಂತಿಕೆಗೂ ಬಹಳ ಆಶ್ಚರ್ಯಪಟ್ಟರು. ಕೆಲವರು ಅವನಿಗೆ ವೈದ್ಯಕೀಯ ಕಲಿಸಲು ಹೇಳಿದರು. ಮತ್ತೆ ಕೆಲವರು ಸಂಗೀತ ಹೇಳಿಸಿದರೆ ಒಳ್ಳೆಯ ಖ್ಯಾತಿ ಬರುತ್ತದೆಂದರು. ಶಿಲ್ಪಕಲೆ ಕಲಿಸಿದರೆ ಬಹಳ ಚೆನ್ನಾಗಿ ಇವನಿಗೆ ಒಡಿಸುತ್ತದೆಂದರು ಕೆಲವರು.

ಗಂಗರಾಜನು ಅವರೆಲ್ಲರ ಸಲಹೆಗಳನ್ನೂ ಕೇಳಿ ತಲೆಯಾಡಿಸಿದನು. ಆಮೇಲೆ ತಂದೆ ಮಗಂದಿರು ರಾಜಧಾನಿಯನ್ನು ಸೇರಿ, ಒಂದು ಛತ್ರದಲ್ಲಿ ವಸತಿ ಏರ್ಪಡಿಸಿಕೊಂಡರು.

ಗಂಗರಾಜನು ತುಂಬಾ ಆಲೋಚನೆ ಮಾಡಿ ದಿಲೀಪರ ಗುರುಕುಲಕ್ಕೆ ಹೋಗುವುದಕ್ಕೆ ಮೊದಲು ಚಂದ್ರನನ್ನು ನೋಡುವುದು ಒಳ್ಳೆಯದೆಂದು ಕೊಂಡನು. ಚಂದ್ರನು ಅಲ್ಲೊಬ್ಬರು ಬಂಧುಗಳ ಮನೆಯಲ್ಲಿರುವನೆಂದು ಗೊತ್ತಿತ್ತು. ದಿನಾ ಸಾಯಂಕಾಲ ಅವನು ದಿಲೀಪರ ಗುರುಕುಲಕ್ಕೆ ಹೋಗುತ್ತಿರುವನಂತೆ. ರಾತ್ರಿ ಬಹಳ ಹೊತ್ತಾಗಿ ಮನೆಗೆ ಬಂದು ಮಲಗಿದರೆ, ಬೆಳಿಗ್ಗೆ ಬಹಳ ತಡವಾಗಿಯೇ ನಿದ್ದೆಯಿಂದ ಏಳುವನಂತೆ.

ಆದುದರಿಂದ ಗಂಗರಾಜನೂ, ಸುಶಾಂತನೂ ಬೆಳಿಗ್ಗೆಯೇ ಚಂದ್ರನಿರುವಲ್ಲಿಗೆ ಹೋದರು. ಆಗ ಅವನು ಇನ್ನೂ ಎದ್ದಿರಲಿಲ್ಲ. ಮನೆಯ ಹೆಂಗುಸೊಬ್ಬಳು ಅವನನ್ನು ಕೂಗಿ ಕರೆದು ಬಲವಂತದಿಂದ ಎಬ್ಬಿಸಿದಳು.

ಚಂದ್ರನು ಬೇಸರದಿಂದ ಕಣ್ಣು ಹೊಸಗಿಕೊಳ್ಳುತ್ತಾ ಎದ್ದು ಹೊರಗೆ ಬಂದು, ಗಂಗರಾಜ, ಸುಶಾಂತರನ್ನು ನೋಡಿ, ಬಂದ ಕೆಲಸವೇನೆಂದು ವಿಚಾರಿಸಿದನು.

ಗಂಗರಾಜನು ಹೇಳಿದುದನ್ನು ಕೇಳಿ, "ಓಹೋ! ನಿಮ್ಮ ಮಗನು ಈ ಮೊದಲು ಯಾರ ಹತ್ತಿರವಾದರೂ ವಿದ್ಯಾಭ್ಯಾಸ ಮಾಡಿದ್ದಾನೆಯೇ?" ಎಂದು ಪ್ರಶ್ನಿಸಿದನು ಚಂದ್ರ. "ಹಾಗೇನೂ ಇಲ್ಲ" ಎಂದನು ಗಂಗರಾಜ.





"ಸ್ವಲ್ಪಮಟ್ಟಿಗಾದರೂ ವಿದ್ಯೆ ಕಲಿತು ಬರುವವರ ಹೊರತು ಬೇರೆಯವರಿಗೆ ನಮ್ಮ ಗುರು ದಿಲೀಪರು ವಿದ್ಯೆ ಕಲಿಸುವುದಿಲ್ಲ. ಹಾಗೆ ಸರಾಸರಿ ಅವರ ಬಳಿಗೆ ಬರುವವರನ್ನು ಅಹಂಕಾರಿಗಳೆಂದೇ ತಿಳಿಯುತ್ತಾರೆ. ದಿಲೀಪರು ಯಾವುದನ್ನಾದರೂ ಸಹಿಸುವರೇ ಹೊರತು ಅಹಂಕಾರವನ್ನು ಮಾತ್ರ ಸಹಿಸರು" ಎಂದನು ಚಂದ್ರ.

"ಅದಕ್ಕೇ ನಿಮ್ಮ ಸಹಾಯ ಕೇಳಲು ಬಂದದ್ದು. ಮಗನನ್ನು ನಿಮ್ಮ ಹತ್ತಿರ ಬಿಟ್ಟು ಹೋಗುತ್ತೇನೆ. ನೀವೇ ಸ್ವಲ್ಪ ದೊಡ್ಡ ಮನಸ್ಸು ಮಾಡಿ ಅವನನ್ನು ನಿಮ್ಮ ಗುರುಗಳ ಹತ್ತಿರ ಸೇರಿಸಿದರೆ ದೊಡ್ಡ ಉಪಕಾರ" ಎಂದನು ಗಂಗರಾಜ.

ಚಂದ್ರನು ಸುಶಾಂತನ ಹತ್ತಿರ ಕವಿತ್ವದ ವಿಷಯದಲ್ಲಿ ಕೆಲವು ಕ್ಲಿಷ್ಟಕರವಾದ ಪ್ರಶ್ನೆಗಳನ್ನು ಮಾಡಿದನು. ಅವುಗಳಿಗೆ ಸರಿಯಾದ ಉತ್ತರ ಕೊಡಲು ಸುಶಾಂತನಿಗೆ ಆಗಲಿಲ್ಲ.

"ಇಷ್ಟು ಸಣ್ಣ ವಿಷಯ ಕೂಡಾ ಗೊತ್ತಿಲ್ಲದ ನಿನಗೆ ದಿಲೀಪರಂತಹ ಮಹಾ ಗುರುಗಳು ಬೇಕೇನು ? ಅತ್ಯಾಶೆ ಒಳ್ಳೆಯದಲ್ಲ. ಹಿಂದಿರುಗಿ ನೋಡದೆ ಸೀದಾ ಊರಿಗೆ ಹೋಗಿಬಿಡು" ಎಂದನು ಚಂದ್ರ ಕೋಪದ ಕಂಠದಿಂದ.

ಅಲ್ಲಿಂದ ಗಂಗರಾಜನೂ ಸುಶಾಂತನೂ ವೀರಭದ್ರನ ಮನೆಗೆ ಹೋದರು. ವೀರಭದ್ರನು ಆಗಲೇ ಗುರುಕುಲಕ್ಕೆ ಹೊರಡುವ ಸಿದ್ಧತೆಯಲ್ಲಿದ್ದನು.

"ನಮ್ಮ ಗುರುಗಳು ಯಾವುದನ್ನಾದರೂ ಸಹಿಸುವರೇ ಹೊರತು ಆಲಸ್ಯವನ್ನು ಮಾತ್ರ ಸಹಿಸುವವರಲ್ಲ. ನೀವು ಸಾಯಂಕಾಲ ಬನ್ನಿ" ಎಂದು ವೀರಭದ್ರನು ಹೊರಟುಹೋದನು.

ಆ ದಿನ ಸಾಯಂಕಾಲ ತಂದೆ ಮಗಂದಿರು ಮತ್ತೆ ವೀರಭದ್ರನ ಮನೆಗೆ ಹೋದರು.

"ಈ ಮೊದಲು ನಿಮ್ಮ ಮಗನು ಎಲ್ಲಿಯಾದರೂ ಯುದ್ಧ ವಿದ್ಯೆಯ ಅಭ್ಯಾಸವೇನಾದರೂ ಮಾಡಿದ್ದಾನೆಯೇ ?" ಎಂದು ವೀರಭದ್ರನು ಸುಶಾಂತನನ್ನು ಪರೀಕ್ಷಿಸಿ ನೋಡುತ್ತಾ ಪ್ರಶ್ನಿಸಿದನು.

ಚಂದ್ರನ ಹತ್ತಿರ ಆದ ಅನುಭವವನ್ನು ದೃಷ್ಟಿಯಲ್ಲಿಟ್ಟುಕೊಂಡು ಗಂಗರಾಜನು, "ನಮ್ಮ ಊರಿನಲ್ಲಿ ಒಬ್ಬ ಗುರುವಿನ ಹತ್ತಿರ ಸ್ವಲ್ಪಮಟ್ಟಿಗೆ ಅಭ್ಯಾಸ ಮಾಡಿದ್ದಾನೆ" ಎಂದನು.

"ಹಾಗಾದರೆ ಸಾಧ್ಯವಿಲ್ಲ, ನಮ್ಮ ಗುರು ದಿಲೀಪರು ಮೊದಲಿನಿಂದ ಕಲಿಯಲು ಬರುವವರಿಗಲ್ಲದೆ, ಬೇರೆಯವರಿಗೆ ವಿದ್ಯೆ ಕಲಿಸುವುದಿಲ್ಲ. ಯಾರೋ ಒಬ್ಬರ ಹತ್ತಿರ ಸ್ವಲ್ಪಕಾಲ ವಿದ್ಯೆ ಕಲಿಯುವ ಪ್ರಯತ್ನಮಾಡಿ, ಆವರಿಂದಾಗಲಿಲ್ಲವೆಂದು ತನ್ನ ಹತ್ತಿರ ಬರುವವರನ್ನು ಕಂಡರೆ ಬೆಂಕಿಯಾಗುತ್ತಾರೆ ನಮ್ಮ ಗುರುಗಳು !" ಎಂದನು ವೀರಭದ್ರ.

ಆಗ ಗಂಗರಾಜನು. "ಅಯ್ಯಾ, ನಾನು ಹಾಗೆ ಹೇಳಿದ್ದು ಸುಳ್ಳೇ. ಚಂದ್ರನೆಂಬ ದಿಲೀಪರ ಶಿಷ್ಯನು

ಹೇಳಿದ ಮಾತಿನಿಂದ. ಹಾಗೆ ಸುಳ್ಳನ್ನು ಹೇಳಿ ಬಿಟ್ಟೆನು..." ಎಂದು ಅಲ್ಲಿ ನಡೆದುದನ್ನು ಹೇಳಿದನು.

ವೀರಭದ್ರನು ಅದನ್ನು ಕೇಳಿ, "ಬಹುಶಃ ಅದು ಕವಿತ್ವ ಕಲಿಯಬೇಕೆಂಬ ವಿಷಯದಲ್ಲಿ ನಿಜವಾಗಿರ ಬಹುದು, ಕವಿಗಳು ಇತರರನ್ನು ಆಶ್ರಯಿಸಿಕೊಂಡೇ ಬದುಕುವವರು. ಅವರು ತಮಗೆ ಆಶ್ರಯ ಕೊಟ್ಟು ಪೋಷಿಸುವವರನ್ನು ಮೆಚ್ಚಿಸಲು ಒಂದೇ ಇತಿಹಾಸ ವನ್ನೂ ಪುರಾಣವನ್ನೂ ಮತ್ತೆ ಬರೆಯುತ್ತೇವೆ ಎನ್ನುತ್ತಾರೆ. ಆದರೆ ಯುದ್ಧ ವಿದ್ಯೆಯ ವಿಷಯ ಹಾಗಲ್ಲ, ಪ್ರತಿಯೊಬ್ಬನಿಗೂ ಏನೋ ಒಂದು ಹೊಸ ಪದ್ಧತಿ ಇರುತ್ತದೆ, ಯುದ್ಧ ವಿದ್ಯೆಯ ಅಭ್ಯಾಸ ಮಾಡುವವನು ಇನ್ನೊಬ್ಬರ ಮೇಲೆ ಆಧಾರವಾಗಿರ ಬಾರದು" ಎಂದನು ಗರ್ವದಿಂದ.

"ಅದುದೇನೋ ಆಗಿಹೋಯಿತು, ಈಗ ನೀವೇ ಇವನನ್ನು ಹೇಗಾದರೂ ದಿಲೀಪರ ಹತ್ತಿರ ಸೇರಿ ಸುವ ಉಪಕಾರ ಮಾಡಬೇಕು" ಎಂದನು ಗಂಗರಾಜ.

ವೀರಭದ್ರನು ಸುಶಾಂತನಿಗೆ ಕೆಲವು ಪ್ರಶ್ನೆಗಳನ್ನು ಮಾಡಿ, ಗಂಗರಾಜನನ್ನು ನೋಡಿ. "ನಿಮ್ಮ ಮಗನು ವ್ಯವಸಾಯದ ಕೆಲಸಕ್ಕೆ ಹೊರತು ಯುದ್ಧ ವಿದ್ಯೆ ಕಲಿಯಲು ಉಪಯೋಗವಿಲ್ಲದವನು. ಇಂಥವನನ್ನು ಕರೆದೊಯ್ದು ಕಲಿಸಬೇಕೆಂದು ಹೇಳಿದರೆ ನಮ್ಮ ಗುರುಗಳು ನನ್ನ ಮೇಲೆ ಕೋಪಿಸಿ, ನನ್ನನ್ನೇ ಗುರು ಕುಲದಿಂದ ಹೊರಡಿಸಿಬಿಡುವರು. ನನ್ನ ಸಮಯ ವ್ಯರ್ಥ ಮಾಡಬೇಡಿ" ಎಂದನು.

ಗಂಗರಾಜನು ನಿರುತ್ಸಾಹದಿಂದ ಅಲ್ಲಿಂದ ಮಗ ನನ್ನು ಕರೆದುಕೊಂಡು ಹೊರಟನು. ಆಮೇಲೆ ಅನೇಕ ಕಡೆಗಳಲ್ಲಿ ಕೂಡಾ ಅದೇ ಬಗೆಯ ಅನು ಭವವೇ ಅವರಿಗೆ ಇದಿರಾಯಿತು.

ಛತ್ರದ ಯಜಮಾನನು ದಿನಾ ಈ ತಂದೆ ಮಗಂದಿರು ಎಲ್ಲಿಗೋ ಹೋಗಿ ಬೇಸರದ ಮುಖ ದಿಂದ ಹಿಂದಿರುಗಿ ಬರುವುದನ್ನು ಪರೀಕ್ಷಿಸಿಕೊಂಡೇ



ಇದ್ದನು. ಕಡೆಗೆ ಏನು ಸಂಗತಿ ಎಂದು ಗಂಗರಾಜ ನೊಂದಿಗೆ ಕೇಳಿಬಿಟ್ಟನು. ಗಂಗರಾಜನು ತನ್ನ ಸಂಗತಿ ಯನ್ನೆಲ್ಲಾ ಅವನೊಂದಿಗೆ ಹೇಳಿಕೊಂಡನು.

"ಅಷ್ಟೇನಾ ? ಇಷ್ಟು ಸಣ್ಣ ವಿಷಯಕ್ಕಾಗಿ ಇಷ್ಟು ಕಷ್ಟಪಡುವಿರಾ ? ದಿಲೀಪರ ಶಿಷ್ಯರಿಗೆ ಯಾವ ರಾಜಾಸ್ಥಾನದಲ್ಲಾದರೂ ಕ್ಷಣಮಾತ್ರದಲ್ಲಿ ಉದ್ಯೋಗ ಸಿಕ್ಕಿಬಿಡುತ್ತದೆ. ಅಷ್ಟೇ ಅಲ್ಲದೆ ದೇಶದೊಳಗೆಲ್ಲಾ ಘನ ಸನ್ಮಾನಗಳೂ ಗೌರವವೂ ಲಭಿಸುತ್ತವೆ. ಆದುದರಿಂದ ದಿಲೀಪರು ಕಂಡಕಂಡವರನ್ನೆಲ್ಲಾ ಶಿಷ್ಯ ರಾಗಿ ಸ್ವೀಕರಿಸುವುದಿಲ್ಲ. ನಿಜವಾದ ಕಾರಣವು ಬೇರೆಯೇ ಇದೆ, ಹತ್ತು ಸಾವಿರ ವರಹಾ ಯಾರು ಕೊಡಲು ಸಾಧ್ಯವೋ ಅವರಿಗೇ ದಿಲೀಪರು ವಿದ್ಯೆ ಗಳನ್ನು ಕಲಿಸುತ್ತಾರೆ. ಇದೇ ಅಸಲು ಸತ್ಯ" ಎಂದನು ಛತ್ರದ ಯಜಮಾನ.

ಗಂಗರಾಜನು ಒಂದು ಕ್ಷಣ ಬೆರಗಾದನು. ಆಮೇಲೆ ಮಗನನ್ನು ಕರೆದುಕೊಂಡು, ಒಂದು

ಕ್ಷಣವೂ ರಾಜಧಾನಿಯನ್ನು ತಿರುಗಿ ನೋಡದೆ ತನ್ನ ಮನೆಯ ದಾರಿ ಹಿಡಿದನು. ಸುಶಾಂತನೂ ತಂದೆಯನ್ನು ಅನುಸರಿಸಿ ನಡೆದನು.

ಬೇತಾಳವು ಇಲ್ಲಿಗೆ ಕಥೆಯನ್ನು ನಿಲ್ಲಿಸಿ, "ರಾಜಾ, ಇಲ್ಲಿ ಗಂಗರಾಜನು ದೊಡ್ಡ ಲೋಭಿ ಎಂಬುದು ನಿರೂಪಣವಾಯಿತಷ್ಟೆ? ಅವನು ಹತ್ತು ಸಾವಿರ ವರಹಗಳ ಖರ್ಚಿಗೆ ಮನಸ್ಸಿಲ್ಲದೆ, ಒಬ್ಬನೇ ಒಬ್ಬ ಮಗನಿಗೆ ವಿದ್ಯೆ ಕಲಿಸಲು ಇಷ್ಟವಿಲ್ಲದೆ ಹಿಂದಿರುಗಿದುದು ದೊಡ್ಡ ತಪ್ಪು ಹೌದೋ ಅಲ್ಲವೋ? ಈ ಸಂದೇಹಕ್ಕೆ ತಕ್ಕ ಉತ್ತರ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಸಿಡಿದುಹೋಗುತ್ತದೆ!" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಗಂಗರಾಜನು ಲೋಭಿಯೇನೂ ಅಲ್ಲ. ಅವನು ಮಗನಿಗೆ ಕಲಿಸುವ ವಿಷಯದಲ್ಲಿ ನಿರಾಸಕ್ತನಾಗಿ ಹಿಂದಿರುಗಿದುದು ತಪ್ಪೂ ಅಲ್ಲ. ಅವನು ಮುಖ್ಯವಾಗಿ ನಗರವನ್ನು ಸೇರಿದಾಗಿನಿಂದಲೂ, ದಿಲೀಪರ ಶಿಷ್ಯರಿಂದ ತನಗಾದ ಅನುಭವಗಳೇ ಅವನನ್ನು ಅಂತಹ ನಿರ್ಣಯಕ್ಕೆ ಬರಮಾಡಿದುವು. ಶಿಷ್ಯನ ಅರ್ಹತೆಯನ್ನು ನೋಡಿ ವಿದ್ಯೆ ಕಲಿಸುವುದಕ್ಕೆ ಬದಲು, ಹಣವನ್ನು ನೋಡಿ ವಿದ್ಯೆ ಕಲಿಸುವವನು ಸರಿಯಾದ ಗುರು ಅನ್ನಿಸಿಕೊಳ್ಳಲಾರನು. ದಿಲೀಪರು ಸಮರ್ಥರಾದ ಗುರುಗಳಾಗಿರಬಹುದು. ಅವರ ಪಾಂಡಿತ್ಯವು ಶಿಷ್ಯರನ್ನು ಒಳ್ಳೆಯ ಜ್ಞಾನಿಗಳಾಗಿ ಮಾರ್ಪಡಿಸುವುದಕ್ಕೆ ಬದಲಾಗಿ ಧನಾರ್ಜನೆಯೇ ಗುರಿಯುಳ್ಳವರಾಗುವಂತೆ ಮಾಡುತ್ತದೆ, ಅವರ ಶಿಷ್ಯರೇ ಅದಕ್ಕೆ ಉದಾಹರಣೆಯಾಗಿದ್ದಾರೆ. ಅವರಲ್ಲಿ ಸಾಸಿವೆಯಷ್ಟೂ ವಿನಯವಿರಲಿಲ್ಲ. ಎಲ್ಲರೂ ಗಡ್ಡೆಗಟ್ಟಿದ ದುರಹಂಕಾರಿಗಳು. ಸುಶಾಂತನು ಯಾವ ದೊಡ್ಡ ವಿದ್ಯೆಯನ್ನು ಕಲಿಯದೇನೇ, ಮನೆಯ ಹತ್ತಿರ ತನಗೆ ಎಲ್ಲಾ ಕೆಲಸಗಳಲ್ಲಿಯೂ ಸಹಾಯ ಮಾಡುತ್ತ, ಪ್ರಕೃತಿಯಿಂದಲೂ, ಪ್ರಪಂಚದಿಂದಲೂ ಎಷ್ಟೋ ವಿಜ್ಞಾನವನ್ನು ಸಂಪಾದಿಸಿಕೊಂಡಿದ್ದಾನೆ. ಅವನ ವಿಷಯವನ್ನೂ ಬುದ್ಧಿವಂತಿಕೆಯನ್ನೂ ಊರವರೆಲ್ಲ ಮೆಚ್ಚಿಕೊಳ್ಳುತ್ತಿದ್ದಾರೆ. ತಮ್ಮ ಸಮಸ್ಯೆಗಳನ್ನು ಕೂಡಾ ಅವನೊಂದಿಗೆ ಹೇಳಿ ತೃಪ್ತಿಕರವಾದ ಪರಿಹಾರ ಕಾಣುತ್ತಿದ್ದಾರೆ. ಅಂತಹವನನ್ನು ಹತ್ತು ಸಾವಿರ ವರಹ ಕೊಟ್ಟು ದಿಲೀಪರ ಶಿಷ್ಯನಾಗಿ ಸೇರಿಸುವುದೆಂದರೆ, ಅದು ಕೊಳ್ಳಿಯಿಂದ ತಲೆ ಕೆರೆದುಕೊಂಡಂತೆಯೇ ಆಗುತ್ತದೆ. ಹೀಗೆಂದುಕೊಂಡೇ ಅವನು ಮಗನೊಂದಿಗೆ ಮನೆಗೆ ಹಿಂದಿರುಗಿದ್ದಾನೆ."

ರಾಜನಿಗೆ ಹೀಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.



# ಅಸಂತೃಪ್ತಿ

**ಒಂ**ದುಸಾರಿ ರಾಯಪಾಳ್ಯ ಜಮೀನ್ದಾರರ ಬಳಿಗೆ ಬಡವನಾದ ಕೇಶವನೆಂಬವನು ಬಂದು ಏನೋ ಒಂದು ಕೆಲಸ ಬೇಕೆಂದು ಕೇಳಿದನು.

ಜಮೀನ್ದಾರರು ಅವನೊಂದಿಗೆ ಕೆಲವು ಪ್ರಶ್ನೆಗಳನ್ನು ಕೇಳಿ, ಅವನು ಕೊಟ್ಟ ಉತ್ತರದಿಂದ ತೃಪ್ತರಾಗಿ, "ನಿನಗೆ ಸಂಬಳ ಎಷ್ಟು ಬೇಕು ?" ಎಂದು ಕೇಳಿದರು.

ತಮ್ಮ ಇಷ್ಟ" ಎಂದನು ಕೇಶವ.

"ಅಲ್ಲ, ನಿನಗೆ ಎಷ್ಟು ಬೇಕೆಂದು ಕೇಳು" ಎಂದರು ಜಮೀನ್ದಾರರು.

ಕೇಶವನು ಸಂಕೋಚಿಸಿಕೊಂಡು, "ಇನ್ನೂರು ಕೊಡಿಸಿರಿ ಸ್ವಾಮಿ" ಎಂದನು.

ಜಮೀನ್ದಾರರು ಸರಿಯೆಂದು, ನಾಳೆ ಬಂದು ಕೆಲಸಕ್ಕೆ ಸೇರುವಂತೆ ಹೇಳಿದರು.

ಆ ಕ್ಷಣದಿಂದಲೇ ಕೇಶವನಲ್ಲಿ ಅಸಂತೃಪ್ತಿ ಕುಡಿಯೊಡತೊಡಗಿತು. ತಾನು ಅವಸರಪಟ್ಟು ಇನ್ನೂರು ಕೇಳಿದೆ. ಹಾಗಿಲ್ಲದೆ ಮುನ್ನೂರು ಕೇಳಿದರೂ ಕೊಡುತ್ತಿದ್ದರೇನೋ ? ಇನ್ನು ಕೇಳಲು ಸಾಧ್ಯವಿಲ್ಲದಾಯಿತಲ್ಲಾ ! ಎಂದು ಕಸಿವಿಸಿಗೊಳ್ಳತೊಡಗಿದನು.

ಮರುದಿನ ಅವನು ಜಮೀನ್ದಾರರಲ್ಲಿಗೆ ಹೋಗಿ ತಾನು ಕೆಲಸಕ್ಕೆ ಬಂದೆನೆಂದು ಹೇಳಿದನು. ಜಮೀನ್ದಾರರು ಬೇಸರಪಟ್ಟಂತೆ ಮುಖ ಬಾಡಿಸಿಕೊಂಡು, "ಅಪ್ಪಾ, 'ವ್ಯತ್ಯಾಸವಾಗಿ ತಿಳೀಬೇಡ. ಈ ಹತ್ತು ರೂಪಾಯಿ ತೆಗೆದುಕೊಂಡು ಹೋಗಿಬಿಡು. ಮೊದಲು ಹೇಳದೆ ಓಡಿಹೋಗಿದ್ದ ನೌಕರನು ಮತ್ತೆ ಬಂದು ಕ್ಷಮಿಸಬೇಕೆಂದು ಕಾಲಿಗೆ ಬಿದ್ದ" ಎಂದರು.

ಕೇಶವನು ಜಮೀನ್ದಾರರು ಕೊಟ್ಟ ಹತ್ತು ರೂಪಾಯಿ ತೆಗೆದುಕೊಂಡು, "ಅಯ್ಯಾ, ನನಗೆ ನಿಮ್ಮಲ್ಲಿ ಕೆಲಸವಿಲ್ಲದೇ ಹೋದದ್ದು ಬಹಳ ಸಂತೋಷವಾಗಿದೆ" ಎಂದನು.

"ಅದೇಕೆ ?" ಎಂದು ಆಶ್ಚರ್ಯದಿಂದ ಕೇಳಿದರು ಜಮೀನ್ದಾರರು.

"ಅದೇಕೋ ಹೇಳಲಾರೆನು. ಆದರೆ ಒಂದು ಚಿಕ್ಕ ವಿಷಯ ಅರಿಕೆ ಮಾಡುತ್ತೇನೆ. ದಯಮಾಡಿ ಇನ್ನು ಮೇಲೆ ಕೆಲಸ ಕೇಳಿ ಬರುವವನನ್ನು ಸಂಬಳ ಎಷ್ಟು ಬೇಕೆಂದು ಕೇಳಬೇಡಿ. ಅವನು ಕೆಲಸ ಮಾಡುವುದನ್ನು ನೋಡಿ ನಿಮಗೆ ತೃಪ್ತಿಯೆನಿಸಿದ ಮೇಲೆ ಎಷ್ಟು ಸಂಬಳ ಕೊಡಬಹುದೆಂಬುದನ್ನು ನೀವೇ ನಿರ್ಣಯಿಸಿಬಿಡಿರಿ" ಎಂದನು ಕೇಶವ.

ಕೇಶವನು ಹಾಗೇಕೆ ಹೇಳಿದನೆಂದು ಜಮೀನ್ದಾರರಿಗೆ ಎಷ್ಟು ಯೋಚಿಸಿದರೂ ಅರ್ಥವಾಗಲಿಲ್ಲ.





# ಭಾರದ ಸಂಗತಿ

ರಂಗರಾಜಪುರವೆಂಬುದು ಒಂದು ಚಿಕ್ಕ ಗ್ರಾಮ. ಆ ಊರಿನಲ್ಲಿರುವ ಸುಮಾರು ಮುಕ್ಕಾಲು ಭಾಗದಷ್ಟು ಜನರು ಬಟ್ಟೆ ನೇಯುವ ಕೆಲಸಮಾಡಿ ಜೀವನಯಾತ್ರೆ ಸಾಗಿಸುವವರು. ರಂಗರಾಜಪುರದ ಬಟ್ಟೆಗಳೆಂದರೆ ಒಳ್ಳೆಯ ಹೆಸರಿದ್ದಿತು. ಅಲ್ಲಿ ಗಜಪತಿ ಮತ್ತು ವೆಂಕಟರಾಜು ಎಂಬವರು ಅಕ್ಕಪಕ್ಕದ ಮನೆಯವರಾಗಿದ್ದು ಸ್ನೇಹಿತರಾಗಿದ್ದರು.

ಅವರಿಬ್ಬರೂ ಮಗ್ಗಗಳ ಮೇಲೆ ಒಳ್ಳೊಳ್ಳೆಯ ಜರಿ ಕೆಲಸಗಾರಿಕೆಯ ವಸ್ತ್ರಗಳನ್ನು ನೇದು ಅವುಗಳನ್ನು ಪಟ್ಟಣಕ್ಕೆ ತೆಗೆದುಕೊಂಡು ಹೋಗಿ ದೊಡ್ಡ ದೊಡ್ಡ ವರ್ತಕರಿಗೆ ವಿಕ್ರಯಿಸುತ್ತಿದ್ದರು. ಅವರಿಬ್ಬರ ಬಟ್ಟೆಗಳಿಗೆ ಒಳ್ಳೆಯ ಗಿರಾಕಿಗಳಿದ್ದುವು.

ಗಜಪತಿಗೆ ಸ್ವಂತವಾದ ಎತ್ತಿನ ಗಾಡಿ ಇದ್ದಿತು. ಅವನು ಪಟ್ಟಣಕ್ಕೆ ಬಟ್ಟೆಗಳನ್ನು ಗಾಡಿಯಲ್ಲಿ ಸಾಗಿಸಿ, ಗಾಡಿಯಲ್ಲೇ ಹಿಂದಿರುಗುತ್ತಿದ್ದನು. ವೆಂಕಟರಾಜುವಿನದು ದೊಡ್ಡ ಸಂಸಾರ. ಸಂಪಾದನೆ ಚೆನ್ನಾಗಿದ್ದರೂ ಖರ್ಚೂ ಹೆಚ್ಚೇ. ಗಾಡಿ ಕೊಂಡುಕೊಳ್ಳುವ ತಾಕತ್ತು ಅವನಿಗಿರಲಿಲ್ಲ. ಆದುದರಿಂದ ಅವನು ಅಗತ್ಯಬಿದ್ದಾಗ ಬಾಡಿಗೆ ಗಾಡಿಯಲ್ಲಿ ಪಟ್ಟಣಕ್ಕೆ ಹೋಗಿ ಬರುತ್ತಿದ್ದನು. ಬಾಡಿಗೆಗೆ ಗಾಡಿ ಸಿಕ್ಕದೆ ಹೋದಾಗ, ಜವುಳಿ ಮೂಟೆಯನ್ನು ತಲೆಯಲ್ಲೇ ಹೊತ್ತುಕೊಂಡು ಹೋಗುವನು.

ತನ್ನ ಒಳಿತು, ತನ್ನ ಅಗತ್ಯಗಳ ಹೊರತು, ಇನ್ನೊಬ್ಬರ ಗೊಡವೆ ಹಚ್ಚಿಕೊಳ್ಳುವ ಗುಣ ಗಜಪತಿಗಿರಲಿಲ್ಲ. ಸ್ನೇಹಿತರಾದರೂ ಅವನ ಗುಣ ಹಾಗೇನೇ. ತನ್ನ ಗಾಡಿ ಖಾಲಿಯಾಗಿ ಮನೆ ಮುಂದೆ ನಿಂತಿದ್ದರೂ ವೆಂಕಟರಾಜುವಿನ ಅಗತ್ಯಕ್ಕೆ ಅದನ್ನು ಕೊಡುವವನಲ್ಲ. ಅದರ ಮೇಲೆ ವೆಂಕಟರಾಜುವಿನ ಆರ್ಥಿಕ ಪರಿಸ್ಥಿತಿ ತಿಳಿಯದವನ ಹಾಗೆ, "ಏನು ವೆಂಕಟರಾಜೂ, ಎಷ್ಟು ಕಾಲ ಬಾಡಿಗೆ ಗಾಡೀಲಿ ಪರದಾಡಿಕೊಂಡಿರುತ್ತೀಯೋ? ನನ್ನ ಮಾತು ಕೇಳು. ವ್ಯಾಪಾರ ಸರಿಯಾಗಿ ಸಾಗಬೇಕಾದರೆ ಸ್ವಂತ ಗಾಡಿ ಬೇಕು. ಸ್ವಂತ ಗಾಡಿಯ ಉಪಯೋಗ ಬಾಡಿಗೆ ಗಾಡಿಯಿಂದ ಬಂದೀತೇ ?" ಎನ್ನುತ್ತಿದ್ದನು.

ಈ ಬಗೆಯ ಮಾತುಗಳನ್ನು ಕೇಳಿದಾಗ ವೆಂಕಟರಾಜು ನಕ್ಕು ಸುಮ್ಮನೆ ತಲೆಯಾಡಿಸಿಬಿಡುವನು.

ಆ ಗ್ರಾಮದಲ್ಲಿ ಅವರಿಬ್ಬರಿಗೂ ರಾಮಪ್ಪನೆಂಬ ಸ್ನೇಹಿತನೊಬ್ಬನಿದ್ದನು. ಅವನು ಅಲ್ಲಿರುವವರೆಲ್ಲರಿ

ಜಿ. ನಿರ್ಮಲಾದೇವಿ

ಗಿಂತಲೂ ಹೆಚ್ಚು ಓದಿಕೊಂಡವನು. ತಕ್ಕ ಉದ್ಯೋಗ ದೊರಕದೆ, ಬೇಸಾಯದ ಕೆಲಸದಲ್ಲಿ ತಂದೆಗೆ ಸಹಾಯ ಮಾಡುತ್ತ ಊರೊಳಗೇ ಇದ್ದನು.

ಆದರೂ ಅವನು ಉದ್ಯೋಗದ ಪ್ರಯತ್ನ ಮಾಡಿಕೊಂಡೇ ಇದ್ದುದರಿಂದ, ಪಟ್ಟಣದಲ್ಲಿದ್ದ ಅವನ ಬಂಧುಗಳೊಬ್ಬರ ಪ್ರಭಾವದಿಂದಾಗಿ, ಅಲ್ಲಿ ಒಂದು ಉದ್ಯೋಗ ದೊರಕಿತು. ಆ ಕಾರಣದಿಂದ ರಾಮಪ್ಪನು ತನ್ನ ಹೆಂಡತಿ ಮಕ್ಕಳೊಂದಿಗೆ ಪಟ್ಟಣಕ್ಕೆ ಹೋಗಿ ಅಲ್ಲೇ ಮನೆ ಮಾಡಿಕೊಂಡು ತಳವೂರಿದನು.

ಹೀಗೆ ರಾಮಪ್ಪನು ಪಟ್ಟಣಕ್ಕೆ ಹೋಗಿ, ಸೇರಿದ ಮೇಲೆ, ಗಜಪತಿಯಾಗಲೀ, ವೆಂಕಟರಾಜುವಾಗಲೀ ಪಟ್ಟಣಕ್ಕೆ ಹೋಗುವಾಗ, ರಾಮಪ್ಪನ ತಾಯಿ ತನ್ನ ಮಗನಿಗಾಗಿ ಏನಾದರೂ ಭಕ್ಷ್ಯಗಳನ್ನು ತಯಾರಿಸಿ ಅವರ ಮೂಲಕ ಕಳುಹಿಸುತ್ತಾ ಇದ್ದಳು.

ರಾಮಪ್ಪನಿಗೆ ಅತಿಥಿ ಸತ್ಕಾರದ ಗುಣವಿತ್ತು. ಅವನ ಹೆಂಡತಿ ಸುಮತಿ ಕೂಡಾ ಹಾಗೇನೇ. ಆದರ ಮೇಲೆ ಬಲು ರುಚಿಯಾಗಿ ಅಡಿಗೆ ಮಾಡುತ್ತಿದ್ದಳು. ಸ್ನೇಹಿತರಾರಾದರೂ ಮನೆಗೆ ಬಂದರೆ ಊಟಕ್ಕೆ ಒತ್ತಾಯಿಸುತ್ತಿದ್ದನು ರಾಮಪ್ಪ.

ವೆಂಕಟರಾಜು ರಾಮಪ್ಪನ ಒತ್ತಾಯಕ್ಕೆ ಮಣಿಯುತ್ತಿರಲಿಲ್ಲ. ಏನೋ ಒಂದು ಕಾರಣ ಹೇಳಿ ಊಟಕ್ಕೆ ಅಲ್ಲಿ ನಿಲ್ಲದೆ, ಪಟ್ಟಣದ ತನ್ನ ಕೆಲಸ ಮುಗಿಸಿ ಹಿಂದಿರುಗುತ್ತಿದ್ದನು.

ಗಜಪತಿ ಹಾಗಲ್ಲ. ಅವನು ಪಟ್ಟಣಕ್ಕೆ ಹೋದ ಪ್ರತಿ ಸಾರಿಯೂ ರಾಮಪ್ಪನ ಮನೆಯಲ್ಲೇ ಊಟ ಮಾಡುತ್ತಿದ್ದನು. ಈ ಮೊದಲು ಅವನಿಗೆ ಪಟ್ಟಣದಲ್ಲಿ ಎಲ್ಲಿಯೂ ತೃಪ್ತಿಕರವಾದ ಒಳ್ಳೆಯ ಭೋಜನ ಸಿಕ್ಕದೆ ಕಷ್ಟಪಡುತ್ತಿದ್ದನು. ಅವನು ಒಳ್ಳೆಯ ಭೋಜನಪ್ರಿಯ ಮನುಷ್ಯ.

ಹೀಗೆಯೇ ಕಾಲ ಕಳೆಯುತ್ತಿರಲು, ಕ್ರಮವಾಗಿ ರಾಮಪ್ಪನ ಮನೆಯಲ್ಲಿ ತನಗೆ ಉಪಚಾರ ಕಡಿಮೆಯಾಗುತ್ತಾ ಬರುವುದೆಂದು ಗಜಪತಿಗೆ ಅನುಮಾನವಾಯಿತು. ಸುಮತಿಯೂ ಮಕ್ಕಳೂ ಅವನನ್ನು



ಲಕ್ಷ್ಯ ಮಾಡದೆ, ನಕ್ಕು ಆದರ ತೋರದೆ, ತಮ್ಮೊಳಗೆ ವೆಂಕಟರಾಜುವನ್ನು ಶ್ಲಾಘಿಸಿ ಮಾತಾಡಿಕೊಳ್ಳುತ್ತಿದ್ದರು. ಅವನ ಮೇಲೆ ತುಂಬ ಮೆಚ್ಚುಗೆ ತೋರುತ್ತಿದ್ದರು.

ಒಂದು ದಿನ ಗಜಪತಿ ವೆಂಕಟರಾಜುವಿನ ಮನೆಗೆ ಹೋಗಿ ಜವುಳೀ ವ್ಯಾಪಾರದ ವಿಷಯದಲ್ಲಿ ಸ್ವಲ್ಪ ಹೊತ್ತು ಏನೇನೋ ಮಾತಾಡಿ, "ವೆಂಕಟ್ರಾಜೂ, ನಿನಗೂ ಈ ಸಂಗತಿ ತಿಳಿದೇ ಇರಬಹುದು, ಸ್ನೇಹದ ಬೆಲೆ ಎಂತಹುದೆಂದು ಸಣ್ಣ ಸಣ್ಣ ಹಳ್ಳಿಗಳಲ್ಲಿ ವಾಸಿಸುವ ನಮ್ಮಂಥವರಿಗಷ್ಟೇ ಗೊತ್ತು. ಪಟ್ಟಣದ ಜೀವಿತವೇ ಬೇರೆ. ಇದಕ್ಕೆ ಉದಾಹರಣೆ ರಾಮಪ್ಪ. ಅವನಿಗೂ ಅವನ ಹೆಂಡತಿಗೂ ಪಟ್ಟಣದ ಗಾಳಿ ಚೆನ್ನಾಗಿ ತಗಲಿದೆ. ಅವರಲ್ಲಿ ಮೊದಲಿದ್ದ ಆತ್ಮೀಯತೆಯೂ ಅಭಿಮಾನವೂ ಈಗ ತುಂಬಾ ತಗ್ಗಿದೆ" ಎಂದನು.

ವೆಂಕಟರಾಜು ಆಶ್ಚರ್ಯದಿಂದ, "ನನಗೆ ಹಾಗೆ ಕಾಣುವುದಿಲ್ಲ. ನನ್ನ ಮೇಲೆ ಆ ಗಂಡಹೆಂಡಿರಿಬ್ಬರೂ ಮೊದಲಿದ್ದ ಹಾಗೇ ಇದ್ದಾರೆ" ಎಂದನು.

ಗಜಪತಿ ಸ್ವಲ್ಪ ಗೇಲಿಯಾಗಿ "ಅದೂ ನಿಜವೇ ಅನ್ನು. ನಿನ್ನನ್ನು ಅವರು ಹೊಗಳಿ ಆಕಾಶಕ್ಕೆತ್ತುತ್ತಾರೆ. ನಾನೂ ಕೇಳಿದ್ದೇನೆ. ಅದರೊಳಗಿನ ಗುಟ್ಟು ದೇವರಿಗೇ ಗೊತ್ತು !" ಎಂದನು.

"ಅದರೊಳಗೆ ಗುಟ್ಟೇನಿದೆ ಮಣ್ಣು ? ಯಾವಾಗಲೂ ಮಾತು ಮಾತ್ರಕ್ಕಿರುವಷ್ಟು ಬೆಲೆ ಕೊತು ಊಟ ಮಾಡುವುದಕ್ಕಿರಲಾರದು" ಎಂದು ಹೇಳಿ ವೆಂಕಟರಾಜು ಎದ್ದು ಒಳಗೆ ಹೋದನು.

ಆ ಮಾತು ಗಜಪತಿಯ ಬೆನ್ನಿಗೆ ಹೊಡೆದ ಹಾಗಾಯಿತು. ವೆಂಕಟರಾಜುವಿಗೆ ರಾಮಪ್ಪನ ಮನೆಯಲ್ಲಿ ಅಷ್ಟು ಗೌರವ ಬರುವ ಕಾರಣವು ಪಳಕ್ಕನೆ ಅವನ ಕಣ್ಣಿಗೆ ಹೊಳೆಯಿತು.

ಹೆಂಡತಿ ಮಕ್ಕಳೊಂದಿಗೆ ಪಟ್ಟಣದಲ್ಲಿ ವಾಸ ಮಾಡುವ ರಾಮಪ್ಪನಂತಹ ಸಾಧಾರಣ ಉದ್ಯೋಗಸ್ಥನ ಮನೆಯಲ್ಲಿ ಭೋಜನಪ್ರಿಯನಾದ ತಾನು ಹೋದಾಗಲೆಲ್ಲ ಉಚಿತದೂಟ ಮಾಡುವುದೆಂದರೆ ಅವರಿಗೆ ಬಹಳ ಭಾರವೆನಿಸುವ ಸಂಗತಿ.

ಇದನ್ನು ತಿಳಿದು ಗಜಪತಿಯ ಗುಣದಲ್ಲಿ ಬಹಳ ಮಾರ್ಪಾಡು ಬಂದಿತು. ಇನ್ನೊಬ್ಬರ ಕಷ್ಟಸುಖಗಳನ್ನು ತಿಳಿದು, ಅದಕ್ಕೆ ಅನುಕೂಲವಾಗಿ ಪ್ರವರ್ತಿಸುವುದನ್ನು ಕಲಿತನು. ಅವನು ವೆಂಕಟರಾಜುವಿನ ಅಗತ್ಯಗಳಿಗೆ ತನ್ನ ಗಾಡಿ ಕೊಡತೊಡಗಿದನು. ಅಲ್ಲದೆ ಪಟ್ಟಣಕ್ಕೆ ಹೋದಾಗ ಬರಿಗೈಯಲ್ಲಿ ಹೋಗದೆ ರಾಮಪ್ಪನ ಮಕ್ಕಳಿಗೆ ಚಿಕ್ಕ ಪುಟ್ಟ ಬಹುಮಾನಗಳನ್ನು ಕೊಡುತ್ತ, ಅಲ್ಲಿ ಊಟಕ್ಕಿರುವುದನ್ನು ತಪ್ಪಿಸಿಕೊಳ್ಳಲಿಕ್ಕೂ ತೊಡಗಿದನು.



# ರಾಕ್ಷಸ ನೀತಿ

**ಒಂ**ದುಸಾರಿ ಒಂದು ಭಕ್ತರ ವೃಂದವು ಕಾಶಿ ಯಾತ್ರೆಗೆ ಹೊರಟಿತ್ತು.

ಆಗ ಒಂದು ಕಾಡಿನೊಳಗಿನ ದಾರಿಯಿಂದಾಗಿ ಅವರು ಪ್ರಯಾಣ ಮಾಡಬೇಕಾಯಿತು. ಆ ಕಾಡಿನೊಳಗೆ ಒಬ್ಬ ರಾಕ್ಷಸನಿದ್ದನು. ಅವನಿಗೆ ಅಷ್ಟು ಮಂದಿ ಮನುಷ್ಯರನ್ನು ಒಂದೇಸಾರಿ ನೋಡಿದ ಕೂಡಲೇ, ಚಿಕ್ಕದೊಂದು ತಮಾಷೆ ಮಾಡೋಣವೆನಿಸಿತು.

ಅವನು ಒಂದು ಮಹಾ ವೃಕ್ಷದ ಮೇಲಿನಿಂದ ಹೂಂಕರಿಸುತ್ತಾ ಆ ಯಾತ್ರಿಕರ ಮುಂದೆ ಹಾರಿದನು. ಯಾತ್ರಿಕರೆಲ್ಲರೂ ಗದಗದನೆ ನಡುಗ ತೊಡಗಿದರು.

ರಾಕ್ಷಸನು ಅವರೊಂದಿಗೆ, "ಹೆದರಬೇಡಿ, ನಿಮ್ಮಲ್ಲಿ ಯಾರೋ ಒಬ್ಬರು ತಾನಾಗಿ ನನ್ನ ಬಾಯಿಗೆ ಬೀಳಲು ಸಿದ್ಧನಾದರೆ ಉಳಿದವರೆಲ್ಲರನ್ನೂ ಬಿಟ್ಟುಬಿಡುತ್ತೇನೆ. ಹಾಗೆ ಯಾರೂ ಇಲ್ಲದಿದ್ದರೆ ಎಲ್ಲರನ್ನೂ ಕೊಂದುಬಿಡುತ್ತೇನೆ" ಎಂದನು.

ಯಾತ್ರಿಕರೆಲ್ಲಾ ತನ್ನ ಪಕ್ಕದಲ್ಲಿರುವವನೊಬ್ಬ ರಾಕ್ಷಸನ ಬಾಯಿಗೆ ಬೀಳಲು ಸಿದ್ಧನಾದರೆ ಒಳ್ಳೆಯದಿತ್ತು ಎಂದುಕೊಂಡರು. ಯಾರೂ ಅದಕ್ಕೆ ಸಿದ್ಧರಾಗಲಿಲ್ಲ.

ಆಗ ರಾಕ್ಷಸನು ಎಲ್ಲರನ್ನೂ ಕೊಲ್ಲಲು ಮುಂದೆ ಬಂದನು.

ಅಷ್ಟರಲ್ಲಿ ಕುಟುಂಬ ಕಷ್ಟದಿಂದ ಗಂಗೆಯಲ್ಲಿ ಬಿದ್ದು ಸಾಯಲಿಕ್ಕೆಂದೇ ಯಾತ್ರಿಕರೊಂದಿಗೆ ಹೊರಟಿದ್ದ ಸಾರಂಗಪಾಣಿ ಎಂಬವನು ಮುಂದೆ ಬಂದು "ನಾನಿದ್ದೇನೆ. ನನ್ನನ್ನು ಥಕ್ಕನೆ ಕೊಂದು ತಿಂದು ಉಳಿದವರನ್ನು ಬಿಡಯ್ಯಾ!" ಎಂದನು.

ರಾಕ್ಷಸನು ಮುಗುಳು ನಗುತ್ತಾ, ಸಾರಂಗಪಾಣಿಯನ್ನು ಬಿಟ್ಟು, ಉಳಿದೆಲ್ಲರನ್ನೂ ಕೊಂದು, ಸಾವಕಾಶವಾಗಿ ಭಕ್ಷಿಸಿದನು.





# ಯಾರು ಶ್ರೇಷ್ಠ?

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದ ಕಾಲದಲ್ಲಿ, ಬೋಧಿಸತ್ವನು ಕಾಶೀ ರಾಜನಿಗೆ ಕುಮಾರನಾಗಿ ಅವತಾರವೆತ್ತಿದನು. ಅವನು ತಕ್ಷಶಿಲೆಯ ವಿದ್ಯಾಪೀಠಕ್ಕೆ ಹೋಗಿ ವಿದ್ಯಾಭ್ಯಾಸ ಮಾಡುತ್ತ, ಹದಿನಾರು ವರ್ಷ ಪ್ರಾಯ ತುಂಬುವುದರೊಳಗೆ ರಾಜನೀತಿ ಮೊದಲಾದ ಸಮಸ್ತ ಶಾಸ್ತ್ರಗಳನ್ನೂ, ಪುರಾಣಗಳನ್ನೂ ಇತರ ವಿದ್ಯೆಗಳನ್ನೂ ಕಲಿತು ಮುಗಿಸಿದನು. ತರುವಾಯ ತಂದೆ ತೀರಿಹೋದ ಮೇಲೆ ಪಟ್ಟಾಧಿಷ್ಠಿತನಾದ ರಾಜನಾಗಿ ಧರ್ಮವು ಸ್ವಲ್ಪವೂ ತಪ್ಪದಂತೆ ರಾಜ್ಯಪಾಲನೆ ಮಾಡಲು ತೊಡಗಿದನು.

ಅವನ ಪಾಲನೆ ಪ್ರಾರಂಭವಾದ ಮೇಲೆ ಪ್ರಜೆಗಳಿಗೆ ಯಾವ ಕಷ್ಟಾನುಭವವೂ ಬರಲಿಲ್ಲ, ಅರಿಷ್ಟಗಳೂ, ಅನ್ಯಾಯಗಳೂ, ಅಕ್ರಮಗಳೂ, ಎಲ್ಲಿಯೂ ಇಲ್ಲದೆ ಹೋದುವು. ಜನರ ಜೀವನವು ಸುಖವಾಗಿ ನಡೆಯುತೊಡಗಿತು. ನ್ಯಾಯಾಸ್ಥಾನಗಳಿಗೆ ಯಾವ ಕೆಲಸವೂ ಇಲ್ಲದೆ ಪಾಳು ಸುರಿಯತೊಡಗಿತು. ವರ್ಷಗಳು ಉರುಳುತ್ತಿದ್ದಂತೆ ರಾಜಾಸ್ಥಾನಕ್ಕೆ ಯಾವ ದೂರೂ ಬರಲಿಲ್ಲ. ಯಾರೂ ಯಾರ ಮೇಲೂ ಫಿರ್ಯಾದಿ ಮಾಡಲಿಲ್ಲ. ಪ್ರಜೆಗಳಲ್ಲಿ ಯಾವ ಬಗೆಯ ಆಂದೋಳನೆಯೂ ಇಲ್ಲದೆ ಹೋದುದರಿಂದ, ರಾಜನಿಗೆ ಏನೋ ಅನುಮಾನ ಬರತೊಡಗಿತು. ತನ್ನಿಂದ ಏನಾದರೂ ತಪ್ಪುಗಳಾಗಿರಬಹುದೆ? ಲೋಪವೇನಾದರೂ ನಡೆದಿದ್ದೀತೆ? ಜನರು ತನ್ನನ್ನು ಕುರಿತು ಏನೆಂದುಕೊಳ್ಳುತ್ತಾರೆ? ಇದನ್ನೆಲ್ಲ ತಿಳಿಯದೆ ರಾಜನಿಗೆ ಸಮಾಧಾನವೆನಿಸಲಿಲ್ಲ. ಕಡೇಪಕ್ಷ ಏನಾದರೂ ವ್ಯಾಜ್ಯಗಳು ಬಂದರೆ, ಆಸ್ಥಾನಕ್ಕೆ ಪ್ರಜೆಗಳು ಬಂದು ಹೋಗುವ ಹಾಗಾದರೆ, ಅವರ ಮೂಲಕ ಇತರ ಪ್ರಜೆಗಳ ಅಭಿಪ್ರಾಯ ಗೊತ್ತಾಗುವ ಸಂಭವವಿರುತ್ತಿತ್ತು. ಆದರೆ ಈಗ ಆಸ್ಥಾನದ ಕಡೆಗೆ ಹಣಿಕಿ ನೋಡುವವರೇ ಇಲ್ಲದೆ ಹೋಗಿದ್ದಾರೆ. ರಾಜನಿಗೂ ಪ್ರಜೆಗಳಿಗೂ ಸಂಬಂಧವಿಲ್ಲದಂತಾಗುವುದು ಪಾಲನೆಯ ಲಕ್ಷಣವೆನಿಸದು.

ಆದುದರಿಂದ ಒಂದು ದಿನ ರಾಜನು ತನ್ನ ರಥದ ಮೇಲೆ ಏರಿಕೊಂಡು, ಕಾಶೀ ನಗರದೊಳಗೆಲ್ಲಾ ತಿರುಗುತ್ತಾ ಕಂಡವರ ಹತ್ತಿರ "ನನ್ನ ಪರಿಪಾಲನೆಯಲ್ಲಿ ನಿಮಗೇನಾದರೂ ಲೋಪಗಳು ಕಾಣುತ್ತವೆಯೇ?" ಎಂದು ಕೇಳಿದನು.

ಎಷ್ಟು ಮಂದಿಯನ್ನು ಕೇಳಿದರೂ ಒಂದೇ ಹೊಯಿಲಿನ ಉತ್ತರ ಬರುತ್ತಿತ್ತು. "ತಮ್ಮ ಪರಿಪಾಲನೆಯಲ್ಲಿ ನಾವೆಲ್ಲಾ ಪರಮ ಸುಖಿಗಳಾಗಿದ್ದೇವೆ. ನಮಗೆ ಯಾವ ಲೋಪವೂ ಕಾಣಿಸುವುದಿಲ್ಲ" ಎಂತಲೇ ಎಲ್ಲರೂ ಹೇಳುತ್ತಿದ್ದರು.

ಅದರಿಂದ ರಾಜನಿಗೆ ತೃಪ್ತಿಯಾಗಲಿಲ್ಲ. ಅವನು ತನ್ನ ರಾಜ್ಯ ಲಾಂಛನಗಳನ್ನೆಲ್ಲ ತೆಗೆದುಹಾಕಿ ಸಾಮಾನ್ಯ ಪೌರನ ವೇಷದಲ್ಲಿ ಸಾಮಾನ್ಯ ರಥದ ಮೇಲೆ ನಗರವನ್ನು ದಾಟಿ ಹಳ್ಳಿಯಿಂದ ಹಳ್ಳಿಗೆ ಪ್ರಯಾಣ ಮಾಡತೊಡಗಿದನು. ಅಲ್ಲಲ್ಲಿಯ ಮರಗಿಡ ತೋಪುಗಳ ನಡುವೆ ಪ್ರಯಾಣ ಮಾಡುತ್ತ, ತನ್ನನ್ನು ಕುರಿತು ಪ್ರಜೆಗಳು ಏನು ಹೇಳಿಕೊಳ್ಳುತ್ತಾರೆಂಬುದನ್ನು ತಿಳಿಯಲು ಪ್ರಯತ್ನಪಡುತ್ತಿದ್ದನು. ಹೀಗೆ ಎಷ್ಟು ಗ್ರಾಮಗಳನ್ನು ತಿರುಗಿದರೂ, ಯಾರ ಹತ್ತಿರ ಏನು ಪ್ರಶ್ನೆ ಕೇಳಿದರೂ ಕಾಶೀ ರಾಜನನ್ನು ಕುರಿತು, ಕೂದಲಿನಷ್ಟು ಆಕ್ಷೇಪಣೆಯ ಮಾತು ಕೂಡಾ ಯಾರೂ ಹೇಳಲಿಲ್ಲ. ತೃಪ್ತಿಯಾದ ಪರಿಪಾಲನೆಯೆಂತಲೇ ಹೇಳುತ್ತಿದ್ದರು.

ಕಡೆಗೆ ರಥವು ರಾಜ್ಯದ ಸರಿಹದ್ದನ್ನು ತಲಪಿತು. ಅಲ್ಲಿಂದ ಹಿಂದಿರುಗುವ ದಾರಿಯನ್ನು ಹಿಡಿದು ಸಾಗತೊಡಗಿತು. ಹಾಗೆ ಅವನು ಸರಿಹದ್ದಿನ ಒಂದು ಇಕ್ಕಟ್ಟಾದ ಸಂದು ದಾರಿಯಲ್ಲಿ ರಾಜಧಾನಿಗೆ ಹಿಂದಿರುಗುವಾಗ, ಅವನಿಗೆ ಇದಿರಾಗಿ ಇನ್ನೊಂದು ರಥವು ಬರುವುದು ಕಾಣಿಸಿತು. ಎರಡು ರಥಗಳೂ ಒಂದನ್ನೊಂದು ದಾಟಿಕೊಂಡು ಹೋಗುವಷ್ಟು ಆ ದಾರಿ ಅಗಲವಾಗಿರಲಿಲ್ಲ. ಎತ್ತರವಾದ ಗುಡ್ಡಗಳು ಎರಡು ಬದಿಗಳಲ್ಲಿಯೂ ಗೋಡೆಗಳಂತಿದ್ದುವು.

ಎರಡು ರಥಗಳೂ ಒಂದಕ್ಕೊಂದು ಇದಿರಾಗಿ ಅಷ್ಟು ದೂರದಲ್ಲಿ ನಿಂತವು.

"ಓ ರಥಸಾರಥೀ! ನಾವು ಮುಂದೆ ಹೋಗಬೇಕು. ಹಿಂದೆ ದಾರಿ ಅಗಲವಾಗಿದೆ. ಅಲ್ಲೀವರೆಗೆ




ನಿನ್ನ ರಥವನ್ನು ಹಿಂದೆ ನಡೆಸಿ ಬದಿಗೆ ನಿಲ್ಲು" ಎಂದನು ಎರಡನೇ ರಥದ ಸಾರಥಿ.

"ನನ್ನನ್ನು ರಥ ಹಿಂಜರಿಸುವಂತೆ ಹೇಳಲು ನಿನಗೆ ಅಧಿಕಾರವೇನಿದೆ? ನೀನೇ ನಿನ್ನ ರಥವನ್ನು ಗುಡ್ಡದಂಚಿನವರೆಗೆ ಹಿಂದೆ ಸರಿಸು. ಅಲ್ಲಿಯೂ ದಾರಿ ಅಗಲವಾಗಿದೆ" ಎಂದು ಶಾಂತ ರೀತಿಯಲ್ಲಿ ಕಾಶೀ ರಾಜನ ಸಾರಥಿ ಹೇಳಿದನು.

"ಈ ರಥದಲ್ಲಿರುವವರು ಕೋಸಲ ಮಹಾರಾಜರು" ಎಂದನು ಎರಡನೇ ಸಾರಥಿ ಕೋಪದಿಂದ ಏರುದನಿಯಲ್ಲಿ.

ಕಾಶೀ ರಾಜ್ಯವು ಎಷ್ಟು ದೊಡ್ಡದೋ, ಕೋಸಲ ರಾಜ್ಯವೂ ಅಷ್ಟೇ ದೊಡ್ಡದು. ವಯಸ್ಸಿನಲ್ಲಿಯೂ ವಿದ್ಯೆಗಳ ಜ್ಞಾನದಲ್ಲಿಯೂ ಕೋಸಲ ರಾಜನಾದ ಮಲ್ಲಿಕನು ಕಾಶೀ ರಾಜನಿಗೆ ಸರಿಸಮಾನನೇ ಆಗಿದ್ದನು. ಅವನು ಕೂಡ ಮಾರುವೇಷದಲ್ಲಿ ತನ್ನಿಂದಾಗಿರುವ ಏನಾದರೂ ಲೋಪಗಳನ್ನು ಹುಡುಕಿ ಸರಿಪಡಿಸಿ

ಕೊಳ್ಳುವ ಉದ್ದೇಶದಿಂದಲೇ ಹೀಗೆ ಹೊರಟು ಇಲ್ಲಿಯವರೆಗೆ ಬಂದಿದ್ದನು.

"ನಿಮ್ಮ ರಾಜರಲ್ಲಿ ನಮ್ಮ ರಾಜರಿಗಿಂತ ಹೆಚ್ಚಿನ ಶ್ರೇಷ್ಠತೆ ಏನಿದೆ ?" ಎಂದು ಕಾಶೀ ರಾಜನ ಸಾರಥಿ ಕೇಳಿದನು.

ಅದಕ್ಕೆ ಕೋಸಲ ರಾಜನ ಸಾರಥಿ ಕೂಡಲೇ ಹೀಗೆಂದನು, ಒಂದು ಬಗೆಯ ರಾಗದಿಂದ :

"ದಳಹಂ ದಳಹಸ್ಸ ಖಿಪತಿ ಮಲ್ಲಿಕೋ
ಮುದುನಾ ಮುದುಲ,
ಸಾಧುಂಪಿ ಸಾಧುನಾ ಜೇತಿ ಅಸಾಧುಂಪಿ
ಅಸಾಧುನಾ,
ಏತಾದಿಸೋ ಅಯಂ ರಾಜಾ ಮಗ್ಗಾ
ಉಯ್ಯಾಹಿ ಸಾರಥಿ"

(ನಮ್ಮ ಮಲ್ಲಿಕ ಮಹಾರಾಜರು ದುಷ್ಟರಿಗೆ ದುಷ್ಟರು, ಸಜ್ಜನರಿಗೆ ಸಜ್ಜನರು ; ಒಳ್ಳೆಯತನವನ್ನು ಒಳಿತಿನಿಂದ ಬಹುಮಾನಿಸುವರು. ದುಷ್ಟರನ್ನು ದುಷ್ಟತನದಿಂದ ನಿಗ್ರಹಿಸುವರು.)

ಅದನ್ನು ಕೇಳಿದ ಕೂಡಲೇ ಕಾಶೀ ರಾಜನ ರಥಸಾರಥಿ ಅದೇ ರಾಗದಿಂದಲೇ ಹೀಗೆ ಉತ್ತರವನ್ನು ಕೊಟ್ಟನು :

"ಅಕ್ಕೋದೇನ ಜಿನೇಕೋಧಂ ಅಸಾಧುಂ
ಸಾಧುನಾ ಜಿನೇ,
ಜಿನೇ ಕದರಿಯಂ ದಾನೇನ ಸಚ್ಚೇನ
ಅಲಿಕವಾದಿನಂ,
ಏತಾದಿ ಸೋ ಅಯಂ ರಾಜಾ ಮಗ್ಗಾ
ಉಯ್ಯಾಹಿ ಸಾರಥಿ"

(ನಮ್ಮ ಮಹಾರಾಜರು ಕೋಪವನ್ನು ಶಾಂತಿಯಿಂದ ಜಯಿಸುವರು, ದುಷ್ಟರನ್ನು ಸಾಧುತ್ವದಿಂದ ವಶಪಡಿಸಿಕೊಳ್ಳುವರು. ಬಹುಮಾನಗಳಿಂದ ಲೋಭಿಗಳನ್ನು ಸೋಲಿಸುವರು. ಸುಳ್ಳುಗಳಿಗೆ ಪ್ರತಿಫಲವಾಗಿ ಸತ್ಯವನ್ನು ಕೊಡುವರು.)

ಕಾಶೀ ರಾಜನ ರಥಸಾರಥಿ ಹೇಳಿದ ಈ ಮಾತುಗಳನ್ನು ಕೇಳಿದ ಕೂಡಲೇ, ಕೋಸಲ ರಾಜ ಮಲ್ಲಿಕನು ಆತುರದಿಂದ ತನ್ನ ರಥದಿಂದ ಕೆಳಗಿಳಿದು ಬಂದು, ಕಾಶೀ ರಾಜನ ಮುಂದೆ ಪ್ರಣಾಮ ಮಾಡಿ, "ಪುಣ್ಯಾತ್ಮಾ, ನನ್ನಲ್ಲಿರುವ ಲೋಪವು ನನಗೀಗ ತಿಳಿಯಿತು. ಅದನ್ನು ಸರಿಪಡಿಸಿಕೊಂಡು ಇನ್ನೂ ಹೆಚ್ಚಿನ ಧರ್ಮದಿಂದ ರಾಜ್ಯಪಾಲನೆ ಮಾಡುತ್ತೇನೆ" ಎಂದನು.

ತರುವಾಯ ಕಾಶೀ ರಾಜನು ತನ್ನ ನಗರಕ್ಕೆ ಹಿಂದಿರುಗಿ ಬಂದು, ಧರ್ಮವು ಕೂದಲೆಳೆಯಷ್ಟು ಕೂಡಾ ತಪ್ಪದಂತೆ, ಆಗಾಗ ಆತ್ಮಪರಿಶೀಲನೆ ಮಾಡುತ್ತಾ, ಅವತಾರ ಸಮಾಪ್ತಿಯವರೆಗೂ ಧರ್ಮಿಷ್ಠ ರಾಜನಾಗಿದ್ದನು.





# ಭಾರತ ಪುನರುಜ್ಜೀವನ

ಭಾರತೀಯ ಚೈತನ್ಯವು ೧೮೫೭ ನೇ ಸಂವತ್ಸರದ ಸಿಪಾಯಿಗಳ ಬಂಡಾಯಕ್ಕೆ ದಾರಿ ಮಾಡಿದಂತೆಯೇ ಭಾರತದ ಪುನರುಜ್ಜೀವನಕ್ಕೆ ಪೋಷಕವಾದ ನೂತನ ಭಾವಗಳೂ, ರಾಷ್ಟ್ರೀಯ ಚೈತನ್ಯವೂ ಸಂಸ್ಕರಣೆಗಳೂ ದೇಶದೊಳಗೆಲ್ಲಾ ಅರಳಲು ತೊಡಗಿದುವು. ಆಗಿನ ಸಾಮಾಜಿಕ ಸಂಸ್ಕರ್ತರಲ್ಲಿ ಮುನ್ನೆಣಿಕೆಗೆ ಬರುವವರು ರಾಜಾರಾಮ್ ಮೋಹನ್ ರಾಯ್.

ಬಂಗಾಳದ ಹೂಗ್ಲೀ ಜಿಲ್ಲೆಯಲ್ಲಿ ೧೭೭೨ ರಲ್ಲಿ ಜನಿಸಿದ ರಾಮ್ ಮೋಹನ್ ರಾಯ್ ಸಮಾಜದಲ್ಲಿ ಹೂತು ಬೇರುಬಿಟ್ಟ ಸತೀಸಹಗಮನ, ವರ್ಣವಿಭೇದ ಮೊದಲಾದ ದುರಾಚಾರಗಳನ್ನು ನಾಶಗೊಳಿಸಲು ಪ್ರಯತ್ನ ಮಾಡಿದರು. ೧೮೨೮ ನೇ ವರ್ಷದಲ್ಲಿ ಬ್ರಹ್ಮ ಸಮಾಜವನ್ನು ಸ್ಥಾಪಿಸಿ ಒಬ್ಬನೇ ದೇವನೆಂದು, ಜಾತಿಭೇದಗಳು ಕೂಡದೆಂದು, ಸ್ತ್ರೀಯರಿಗೆ ವಿಮೋಚನೆ ಕೊಡಬೇಕೆಂದು ಬಹು ದೀಕ್ಷೆಯಿಂದ ಪ್ರಚಾರ ಮಾಡಿದರು.





ಆಂಗ್ಲೇಯರಿಗೆ ಸರಿಸಮಾನವಾಗಿ ಭಾರತೀಯರನ್ನೂ ನೋಡಬೇಕೆಂದು ಅವರು ಕೇಳಿಕೊಂಡರು. ಭಾರತ ದೇಶದಲ್ಲಿ ಇಂಗ್ಲೀಷು ವಿದ್ಯಾಬೋಧನೆಯ ಅಗತ್ಯವನ್ನು ಗುರುತಿಸಿ, ಅದಕ್ಕಾಗಿ ಕಾರ್ಯ ಮಾಡಿದರು. ಢಿಲ್ಲಿಯ ಪಾಲಕನಾದ ಎರಡನೇ ಅಕ್ಬರ್ ಚಕ್ರವರ್ತಿ ರಾಮ್‌ಮೋಹನ್ ರಾಯ್‌ಗೆ 'ರಾಜಾ' ಬಿರುದನ್ನಿತ್ತು ಸತ್ಕರಿಸಿ ಭಾರತ ದೇಶದ ಸ್ಥಿತಿಗತಿಗಳನ್ನು ಆಂಗ್ಲೇಯರಿಗೆ ತಿಳಿಯ ಪಡಿಸಲು ಅವರನ್ನು ಇಂಗ್ಲೆಂಡಿಗೆ ಕಳುಹಿಸಿದನು.



ರಾಜಾರಾಮ್ ಮೋಹನ್ ರಾಯ್ ಇಂಗ್ಲೆಂಡಿನಲ್ಲಿಯೇ ೧೮೩೩ ರಲ್ಲಿ ತೀರಿಹೋದರು. ರಾಮ್ ಮೋಹನ್ ರಾಯ್‌ಯ ತರುವಾಯ ಹೇಳಿಕೊಳ್ಳತಕ್ಕ ಪಂಡಿತರೂ, ಸಂಸ್ಕರ್ತರೂ ಆದವರು ಸ್ವಾಮಿ ದಯಾನಂದ ಸರಸ್ವತಿಯವರೇ. ಅವರು ಗುಜರಾತಿನ ಮೋರ್ವಿಯಲ್ಲಿ ೧೮೨೪ ನೇ ವರ್ಷದಲ್ಲಿ ಹುಟ್ಟಿದರು. ಅವರು ವೇದಗಳಿಗೆ ನೂತನ ವ್ಯಾಖ್ಯಾನ ಬರೆದರು. ಆರ್ಯ ಸಮಾಜವನ್ನು ಸ್ಥಾಪಿಸಿ ಅನೇಕ ಸಂಸ್ಕರಣೆಗಳನ್ನು ಪ್ರವೇಶಗೊಳಿಸಿದರು.

ಸ್ವಾಮಿ ದಯಾನಂದ ಸರಸ್ವತಿಯವರು ದೊಡ್ಡ ವಿದ್ವಾಂಸರು. ಅವರ ಆಲೋಚನೆಗಳು ಹರಿದ್ವಾರದ ಗುರುಕುಲ ವಿದ್ಯಾಲಯಕ್ಕೆ ಎಷ್ಟೋ ಪ್ರೇರಣೆಗಳನ್ನು ಕೊಟ್ಟಿವೆ. ಕೇವಲ ವಿಷಯಗಳನ್ನು ತಿಳಿಯ ಪಡಿಸುವುದು ಮಾತ್ರವಲ್ಲದೆ ಗುರುಕುಲದ ವಿದ್ಯಾವಿಧಾನ, ವಿದ್ಯಾರ್ಥಿಗಳಲ್ಲಿ ನಮ್ಮ ಸಂಸ್ಕೃತಿ, ವಾರಸತ್ವದ ತೂಕಗಳನ್ನು ಗ್ರಹಿಸುವಂತೆ ಮಾಡುವಹಾಗೆ ರೂಪಿಸಲ್ಪಟ್ಟಿತು.





೧೮೩೬ ನೇ ವರ್ಷದಲ್ಲಿ ಬಂಗಾಳದಲ್ಲಿಯ ಕಮರ್‌ಪೂರ್ ಎಂಬ ಗ್ರಾಮದಲ್ಲಿ ಶ್ರೀ ರಾಮಕೃಷ್ಣ ಪರಮಹಂಸರು ಹುಟ್ಟಿದರು. ಅವರು ಆರು ವರ್ಷ ಪ್ರಾಯದಲ್ಲಿ, ಕಪ್ಪಗಿನ ಮೇಘಗಳ ಮೇಲೆ ಹಾರುವ ಬೆಳ್ಳಗಿನ ಕೊಕ್ಕರೆಗಳನ್ನು ನೋಡಿ, ತನ್ಮಯರಾಗಿ ಸರ್ವವನ್ನೂ ಮರೆತು ಧ್ಯಾನ ಸಮಾಧಿ ಸ್ಥಿತಿಯಲ್ಲಿ ಆಧ್ಯಾತ್ಮಿಕಾನಂದವನ್ನು ಹೊಂದುವಂತಾಗಿದ್ದರು.

ರಾಣಿ ರಸ್ಮಯಿ ಕಟ್ಟಿಸಿದ ಕಾಳಿಕಾಲಯದಲ್ಲಿ ರಾಮಕೃಷ್ಣರು ಅರ್ಚಕರಾದರು. ಅವರು ದೇವಿಯ ದರ್ಶನ ಪಡೆದು ಆಕೆಯೊಂದಿಗೆ ಮುಖಾಮುಖೀ ಮಾತಾಡಬಲ್ಲವರು. ಅವರು ಬೇರೆ ಬೇರೆ ಭಕ್ತಿ ಮಾರ್ಗಗಳನ್ನು ಆಚರಿಸಿ ನೋಡಿ, ಎಲ್ಲಾ ಮಾರ್ಗಗಳೂ ಒಂದೇ ದೈವ ಗಮ್ಯವನ್ನು ತಲಪುವುದೆಂದು ಕಂಡುಕೊಂಡರು.





ರಾಮಕೃಷ್ಣ ಪರಮಹಂಸರಿಂದ ಹಲವರು ಆಕರ್ಷಿಸಲ್ಪಟ್ಟು ಅವರ ಭಕ್ತರಾದರು. ಗಾಢ ವಾದ ಆಧ್ಯಾತ್ಮಿಕ ಸತ್ಯಗಳನ್ನು ಅವರು ಸರಳ ವಾಗಿ ನೇರಾಗಿ ತಿಳಿಯಪಡಿಸುವ ರೀತಿ ಭಕ್ತರನ್ನು ಮುಗ್ಧಗೊಳಿಸಿತು. ಕ್ರಮವಾಗಿ ರಾಮಕೃಷ್ಣ ಪರಮಹಂಸರ ಭಕ್ತರು ಅವರನ್ನು ಭಗವದವ ತಾರವೆಂದೇ ಭಾವಿಸತೊಡಗಿದರು.

ರಾಮಕೃಷ್ಣ ಪರಮಹಂಸರಿಂದ ಆಕರ್ಷಿಸಲ್ಪಟ್ಟವ ರಲ್ಲಿ ನರೇಂದ್ರನೆಂಬ ಯುವಕನು ಅವರನ್ನು ಆಶ್ರಯಿಸಿ, ಸ್ವಾಮಿ ವಿವೇಕಾನಂದರೆನಿಸಿದನು. ೧೮೬೩ ನೇ ವರ್ಷದಲ್ಲಿ ಜನಿಸಿದ ಸ್ವಾಮಿ ವಿವೇಕಾನಂದರು ೧೮೮೧ ನೇ ವರ್ಷದಲ್ಲಿ ರಾಮ ಕೃಷ್ಣ ಪರಮಹಂಸರನ್ನು ಮೊತ್ತಮೊದಲು ದರ್ಶನ ಮಾಡಿ ಶಿಷ್ಯರಾದರು.





೧೮೯೩ ನೇ ವರ್ಷದಲ್ಲಿ ಅಮೆರಿಕದ ಚಿಕಾಗೋ ನಗರದಲ್ಲಿ ನಡೆದ ಪ್ರಪಂಚ ಸರ್ವಮತ ಸಮಾವೇಶದಲ್ಲಿ ಸ್ವಾಮಿ ವಿವೇಕಾನಂದರು ಭಾಗವಹಿಸಿದರು. ಅಲ್ಲಿ ಆಧ್ಯಾತ್ಮಿಕ ವಿಷಯಗಳನ್ನು ಅದ್ಭುತವಾಗಿ ವಿಮರ್ಶಿಸುತ್ತ. ಸ್ವಾಮಿ ವಿವೇಕಾನಂದರು ಮಾಡಿದ ಅನರ್ಗಳವಾದ ಉಪನ್ಯಾಸವನ್ನು ಕೇಳಿ ವಾಶ್ಚಾತ್ಯ ಜಿಜ್ಞಾಸುಗಳು ಆಶ್ಚರ್ಯಪಟ್ಟರು.

೧೮೯೩ ನೇ ವರ್ಷದಲ್ಲೇ ಇಂಗ್ಲೆಂಡಿನಲ್ಲಿ ವಿದ್ಯೆಯನ್ನು ಪೂರ್ತಿ ಮಾಡಿ ಯುವಕರಾದ ಅರವಿಂದರು ಭಾರತ ದೇಶಕ್ಕೆ ಹಿಂದಿರುಗಿ ಬಂದರು. ಉತ್ತರೋತ್ತರವಾಗಿ ಅರವಿಂದರು 'ಭಾರತ ರಾಷ್ಟ್ರೀಯ ಪ್ರವರ್ತ'ರೆನಿಸಿ ಪ್ರಖ್ಯಾತರಾದರು.






ಆ ಕಾಲಘಟ್ಟದಲ್ಲಿಯೇ ಪ್ರಮುಖ ಕಾದಂಬರೀಕಾರರೂ ಕವಿಯೂ ಆದ ಬಂಕಿಂಚಂದ್ರ ಚಟರ್ಜೀ ಸುಪ್ರಸಿದ್ಧವಾದ 'ವಂದೇಮಾತರಂ' ಗೀತವನ್ನು ರಚಿಸಿದರು. 'ವಂದೇಮಾತರಂ' ದೇಶಭಕ್ತಿಯ ಗೀತೆ. ಸ್ವಾತಂತ್ರ್ಯ ಸಮರಯೋಧರಿಗೆ ಅದು ತಾರಕ ಮಂತ್ರವಾಗಿ ಉತ್ತೇಜನಗೊಳಿಸಿತು.



# ಎರಡು ಪಿಶಾಚಿಗಳು

ಹಿಂದೆ ದೇವರಹಳ್ಳಿ ಎಂಬ ಚಿಕ್ಕದೊಂದು ಗ್ರಾಮವಿತ್ತು. ಆ ಗ್ರಾಮದಲ್ಲಿ ಗೋವಿಂದಯ್ಯನೆಂಬ ಸಾಮಾನ್ಯ ಗೃಹಸ್ಥನೊಬ್ಬನಿದ್ದನು. ಅವನಿಗೆ ಸುಭಾಷಿಣಿ ಎಂಬವಳೊಬ್ಬಳೇ ಮಗಳು. ಬೇರೆ ಮಕ್ಕಳು ಅವನಿಗಿರಲಿಲ್ಲ. ಮಗನೂ ಮಗಳೂ ಅವಳೇ ಎಂಬ ರೀತಿಯಲ್ಲಿ ಬೆಳೆದಿದ್ದಳು.

ತಂದೆತಾಯಿಗಳ ಅಕ್ಕರೆಯಿಂದ ಬೆಳೆದ ಸುಭಾಷಿಣಿಗೆ ಮದುವೆಯ ವಯಸ್ಸು ಬಂದಿತ್ತು. ಗೋವಿಂದಯ್ಯ ವರನ ಶೋಧನೆಗೆ ಪ್ರಾರಂಭ ಮಾಡಿದನು. ಆದರೆ ಎಲ್ಲಿ ಹೋಗಿ ಪ್ರಸ್ತಾವಿಸಿದರೂ ಸಾವಿರಗಟ್ಲೆ ವರದಕ್ಷಿಣೆ ಕೇಳುವವರೇ ಆದರು. ಅಷ್ಟು ಶಕ್ತಿ ಇಲ್ಲದ ಗೋವಿಂದಯ್ಯನಿಗೆ ಏನು ಮಾಡಬೇಕೆಂದು ಗೊತ್ತಾಗಲಿಲ್ಲ.. ಅವನಿಗೆ ಮಗಳ ಮದುವೆಯ ಚಿಂತೆ ಜ್ವರದ ಹಾಗೆ ಹಿಡಿಯಿತು. ಒಳ್ಳೆಯ ಅಳಿಯ ಹೇಗೆ ಬರುವನೋ ?

ಆ ಸಮಯದಲ್ಲಿ ಪಟ್ಟಣದಲ್ಲಿ ವ್ಯಾಪಾರಮಾಡಿಕೊಂಡಿದ್ದ ಗೋವಿಂದಯ್ಯನ ಚಿಕ್ಕಂದಿನ ಸ್ನೇಹಿತನಾದ ಸುದರ್ಶನನೆಂಬವನು ಒಂದು ದಿನ ಗೋವಿಂದಯ್ಯನ ಮನೆಗೆ ಬಂದನು. ಅಪೂರ್ವವಾಗಿ ಕಲೆತುಕೊಂಡ ಸ್ನೇಹಿತರಿಬ್ಬರೂ ಅನೇಕ ಬಗೆಯ ಸುಖದುಃಖಗಳನ್ನು ಮಾತಾಡಿಕೊಂಡರು. ಆ ಸಂದರ್ಭದಲ್ಲಿ ಗೋವಿಂದಯ್ಯ ತನ್ನ ಮಗಳ ವಿವಾಹದ ಪ್ರಯತ್ನದಲ್ಲಿ ಅಡ್ಡ ತಗಲಿ ಕಂಗೆಡಿಸುವ ವರದಕ್ಷಿಣೆಯ ವಿಷಯವನ್ನು ಹೇಳಿಕೊಂಡು ತನ್ನ ದುಃಖವನ್ನು ವ್ಯಕ್ತಪಡಿಸಿದನು.

ಅದನ್ನು ಕೇಳಿ ಸುದರ್ಶನನು, ವರದಕ್ಷಿಣೆ ಕೊಡುವ ಶಕ್ತಿ ಇಲ್ಲವೆಂದುಕೊಂಡು ಹೀಗೆ ಅಲಕ್ಷ್ಯ ಮಾಡಿ ಕೈ ಕಟ್ಟಿ ಕುಳಿತರೆ ಹೇಗಪ್ಪಾ ? ಸುಭಾಷಿಣಿಗೆ ಇಪ್ಪತ್ತು ವರ್ಷವಾಯಿತೆನ್ನುತ್ತೀ. ಒಳ್ಳೆಯ ಸಂಬಂಧ ಬೇಗನೇ ನೋಡಿಬಿಡು. ಐದಾರು ಸಾವಿರದ ವರೆಗಾದರೆ ನಾನು ಸರಿಪಡಿಸಿಕೊಡುತ್ತೇನೆ. ಅದನ್ನು ಹಿಂದೆ ಕೊಟ್ಟು, ತೀರಿಸುವ ಸಂಗತಿ ಆಮೇಲೆ ಸಾವಕಾಶವಾಗಿ ಆಲೋಚಿಸೋಣ, ಮೊದಲು ತೃಪ್ತಿಕರನಾದ ವರನೊಂದಿಗೆ ಮಗಳ ಮದುವೆಯಾಗಲಿ " ಎಂದನು.

ಸ್ನೇಹಿತನ ಸಹಾಯವನ್ನು ನಂಬಿ ಗೋವಿಂದಯ್ಯನು ಈ ಸಾರಿ ಮಗಳಿಗೆ ಒಳ್ಳೆಯ ಸಂಬಂಧವನ್ನು ಹುಡುಕುತ್ತ, ಕಡೆಗೆ ದೂರದ ಒಂದು

ಎಂ. ಕೆ. ಈಶ್ವರ ರಾವ್



ಊರಿನ ಒಬ್ಬ ಯುವಕನೊಂದಿಗೆ ಮಾತನಾಡಿ ಮದುವೆಯನ್ನು ನಿಶ್ಚಯ ಮಾಡಿದನು. ವರನ ತಾಯಿತಂದೆಯರು ನಗದಾಗಿ ಮೂರು ಸಾವಿರ ವರದಕ್ಷಿಣೆ ಕೊಡಬೇಕೆಂದಿದ್ದರು. ಗೋವಿಂದಯ್ಯ ಅದಕ್ಕೆ ಒಪ್ಪಿಗೆ ಕೊಟ್ಟಿದ್ದನು.

ಹೀಗೆ ಈ ಸಂಬಂಧವು ಗಟ್ಟಿಯಾಗಬೇಕಾದರೆ ಆರು ತಿಂಗಳಾಗಿತ್ತು. ಇನ್ನು ವಿವಾಹ ಮುಹೂರ್ತಕ್ಕೆ ಹದಿನೈದು ದಿನಗಳಷ್ಟೇ ಇವೆ ಎಂದಾಗ, ಗೋವಿಂದಯ್ಯನು ಪಟ್ಟಣಕ್ಕೆ ಹೋಗಿ, ಸುದರ್ಶನನನ್ನು ನೋಡಿ ಸಂಗತಿಯನ್ನೆಲ್ಲಾ ಹೇಳಿ ತನಗೆ ಬೇಕಾದ ಸಹಾಯವನ್ನು ಕೇಳಿದನು.

ಅದನ್ನು ಕೇಳಿ ಸುದರ್ಶನನು ಆಶ್ಚರ್ಯಪಡುವಂತೆ ನಟಿಸುತ್ತ, "ಐದಾರು ಸಾವಿರದವರೆಗೆ ನಾನು ಕೊಡುವೆನೆಂದೆನೇನು ? ಹಾಗೆ ಹೇಳುವಷ್ಟು ತಾಖತ್ತು ನನಗೆಲ್ಲಿತ್ತು ? ನಾನೇನು ಹೇಳಿದೆನೋ, ನೀನೇನು ಅರ್ಥಮಾಡಿಕೊಂಡೆಯೋ ಏನೋ ? ಅದೇನಿದ್ದರೂ ಈಗಂತೂ ನಾನು ವ್ಯಾಪಾರದಲ್ಲಿ ಬಹಳ ನಷ್ಟಕ್ಕೆ ಗುರಿಯಾಗಿ ದೊಡ್ಡ ಚಿಂತೆಯಲ್ಲಿದ್ದೇನೆ. ನನಗೇ ಯಾರಾದರೂ ಹಣ ಸಹಾಯ ಮಾಡಿದರೆ ಒಳ್ಳೆಯದಿತ್ತು" ಎಂದನು.

ಅವನು ಹೇಳಿದುದನ್ನು ಕೇಳಿ ಗೋವಿಂದಯ್ಯ ಬೆರಗಾದನು. ಅವನ ಮೇಲೆ ಕೋಪ ಬಂದರೂ ಸ್ನೇಹಿತನಾದುದರಿಂದ ಕೋಪ ತೋರಿಸಲು ಮನಸ್ಸು ಬಾರದೆ, ಸರಿ ನೋಡೋಣ ಎಂದುಕೊಂಡು ಅಲ್ಲಿಂದ ತನ್ನ ಊರಿಗೆ ಹಿಂದಿರುಗಿದನು.

ಮಾತಾಡಿಟ್ಟ ಮದುವೆಯ ಸಂಬಂಧಿಕರ ಮುಂದೆ ತನ್ನ ಕಷ್ಟವನ್ನು ಹೇಳಿ, ಹೇಗಾದರೂ ಮದುವೆಯ ಮುಹೂರ್ತವನ್ನು ಮುಂದುವರಿಸಿಡುವುದೋ, ಏನೋ ಒಂದು ಮಾಡಬೇಕೆಂದು ಗೋವಿಂದಯ್ಯ ಯೋಚಿಸುತ್ತಿದ್ದನು. ಅಂತಲೇ ಧೈರ್ಯಮಾಡಿ ಒಂದು ಒಳ್ಳೆಯ ದಿನ ನೋಡಿ ಸಾಯಂಕಾಲದ ಹೊತ್ತಿನಲ್ಲಿ ಅವನು ಆ ಸಂಬಂಧಿಕರಿರುವ ಊರಿಗೆ ಹೊರಟನು.

ಕತ್ತಲೆ ತಲೆಹಾಕುವ ಹೊತ್ತಿಗೆ ಗೋವಿಂದಯ್ಯ ಒಂದು ಕಾಡಿನೊಳಗೆ ಸಾಗುವ ದಾರಿಯಲ್ಲಿ ಬೇಗ ಬೇಗನೆ ನಡೆಯುತ್ತಿದ್ದನು. ಆ ದಾರಿಯಲ್ಲಿ ಗಾಡಿಗಳಲ್ಲಿಯೂ, ಕಾಲ್ನಡಿಗೆಯಲ್ಲಿಯೂ ಮನುಷ್ಯರು ಆಗಾಗ ಪ್ರಯಾಣ ಮಾಡುತ್ತಲೇ ಇದ್ದರು. ಆದುದರಿಂದ ಗೋವಿಂದಯ್ಯನಿಗೆ ರಾತ್ರಿಯಾಯಿತೆಂಬ ಭಯವೇನೂ ಇರಲಿಲ್ಲ.

ಒಂದು ಕಡೆಯಲ್ಲಿ ಮರದ ಕೊಂಬೆಯಲ್ಲಿ ಏನೋ ಶಬ್ದವಾಯಿತು. ಗೋವಿಂದಯ್ಯನು ಶಬ್ದ ಬಂದ ಕಡೆಗೆ ತಲೆಯೆತ್ತಿ ನೋಡಿದನು. ಒಂದು ಕರ್‍ರಗಿನ ಆಕಾರವು ಅವನ ಮುಂದೆ ಹಾರಿ, "ನಡೆಯುವ ದಾರಿ ಆಚೆಕಡೆಯಲ್ಲಿರುವಾಗ, ದಾರಿಬಿಟ್ಟು ಹೀಗೆಲ್ಲಿ ಬಂದೆ ? ತಲೆಯಲ್ಲಿ ಭಾರಿ ಆಲೋಚನೆಯೋ ? ಹಾಗೇನಾಯಿತು ?" ಎಂದು ಕೇಳಿತು.



ನಿಜವೇ, ತಾನು ಯೋಚನೆಯಲ್ಲಿ ದಾರಿಯ ಗಮನವಿಲ್ಲದೆ ಕಾಲುದಾರಿಯಲ್ಲಿ ಕಾಡಿನ ನಡುವೆ ಬಂದಿರುವುದು ಗೋವಿಂದಯ್ಯನಿಗೆ ತಿಳಿಯಿತು. ತನ್ನೆದಿರು ನಿಂತಿರುವುದು ಪಿಶಾಚಿ ಎಂದು ತಿಳಿದರೂ ಧೈರ್ಯಶಾಲಿಯಾದ ಗೋವಿಂದಯ್ಯನಿಗೆ ಭಯ ವೇನೂ ಆಗಲಿಲ್ಲ. ಹೆದರಿದವರಿಗೆ ಪಿಶಾಚಿಗಳಿಂದ ತೊಂದರೆ ಎಂದು ಅವನಿಗೆ ಗೊತ್ತಿತ್ತು. ಈ ಪಿಶಾಚಿ ಯಂತೂ ಸೌಮ್ಯವಾಗಿಯೇ ಮಾತಾಡಿಸುತ್ತಿದೆ!

ಗೋವಿಂದಯ್ಯ ಪಿಶಾಚಿಯನ್ನು ನೋಡಿ ಕೈ ಜೋಡಿಸಿ, "ಓ! ನಿಜ ಹೇಳಿದಿ. ಬಗೆಹರಿಯದ ಯೋಚನೆಯಲ್ಲಿ ತಲೆಚಿಟ್ಟು ಹಿಡಿದು ತಿರುಗುತ್ತಿದೆ. ನೀನು ಎಚ್ಚರಿಸದಿರುತ್ತಿದ್ದರೆ ರಾತ್ರಿ ಪೂರಾ ಈ ಕಾಡಿನೊಳಗೆ ಸಿಕ್ಕಿ ಬೀಳುತ್ತಿದ್ದೆ" ಎಂದನು.

"ಹಾಗೇನಾಯಿತು? ನನ್ನೊಡನೆ ಹೇಳಿ ಮುಂದೆ ಹೋಗು. ನಾನೂ ನಿನ್ನ ಸಮಸ್ಯೆಯ ಸ್ವಾರಸ್ಯ ಸವಿಯುತ್ತೇನೆ" ಎಂದಿತು.

"ನಿನ್ನೊಡನೆ ಹೇಳಿದರೆ ನನ್ನ ಮಗಳ ಮದುವೆ ಯಾದೀತೇ? ಪರರ ದುಃಖ ಕೇಳುವವರಿಗೆ ಶೀತಳ ವಂತೆ. ನಿನ್ನ ಕುತೂಹಲಕ್ಕೆ ಹೇಳುತ್ತೇನೆ" ಎಂದು ಗೋವಿಂದಯ್ಯನು ತನ್ನ ಸಂಗತಿಯನ್ನೆಲ್ಲಾ ಪಿಶಾಚಿ ಯೊಂದಿಗೆ ಹೇಳಿದನು.

"ಅಷ್ಟೇನಾ? ಕೇವಲ ಹಣಕ್ಕಾಗಿ ಎಂತೆಂಥ ತಂಟೆ ತಂದುಕೊಳ್ಳುತ್ತಾರಪ್ಪಾ ಈ ಮನುಷ್ಯರು! ಸ್ವಲ್ಪ ನಿಲ್ಲು" ಎಂದು ಹೇಳಿ ಪಿಶಾಚಿ, ಮರದ ಮೇಲೆ ಹಾರಿ, ಒಂದು ಸಣ್ಣ ಗಂಟನ್ನು ತಂದು ಗೋವಿಂದಯ್ಯನಿಗೆ ನೀಡಿ, "ನಿನಗೆ ಬೇಕಾಗುವ ಹಣ ಇದರಲ್ಲಿದೆ. ನಿನ್ನ ಮಗಳ ಮದುವೆ ಜಾಂಜಾಂ ಅಂತ ನೆರವೇರಿಸಿಬಿಡು" ಎಂದು ಹೇಳಿ ಮತ್ತೆ ಮರದ ಮೇಲೆ ಹಾರಿಹೋಯಿತು.

ಗೋವಿಂದಯ್ಯ ಈ ಬಗೆಯ ಅದೃಷ್ಟದಿಂದ ಸಂತೋಷಪಡುತ್ತ ಮನೆಗೆ ಹಿಂದಿರುಗಿದನು. ಆಮೇಲೆ ಯಾವ ತೊಂದರೆಯೂ ಇಲ್ಲದೆ ನಿಶ್ಚಯಿಸಲ್ಪಟ್ಟ ಮುಹೂರ್ತದಲ್ಲಿಯೇ ಸುಭಾಷಿಣಿಯ ಮದುವೆಯಾಯಿತು.

ಮೂರು ದಿನಗಳ ಮೇಲೆ ಮದುಮಗನೂ ಅವನ ತಂದೆತಾಯಿಯರೂ ಸುಭಾಷಿಣಿಯನ್ನು ಕರೆದುಕೊಂಡು ಗಾಡಿಯಲ್ಲಿ ತಮ್ಮ ಊರಿಗೆ ಹೊರಟರು. ವರದಕ್ಷಿಣೆಯ ಗಂಟಿನೊಂದಿಗೆ ಸಾಗುತ್ತಾ, ಅವರ ಗಾಡಿ ಕಾಡುದಾರಿಯೊಳಗಿಂದಾಗಿ ಹೋಗುತ್ತಿತ್ತು.

ಒಂದು ಕಡೆಯಲ್ಲಿ ಪಿಶಾಚಾಕಾರವೊಂದು ಅವರ ಗಾಡಿಯ ಮುಂದೆ ಹಾರಿ ನಿಂತು, "ಓ! ಓ! ಪಿಶಾಚಿಯೇ! ನಿಲ್ಲು! ನೀನೇಕೆ ಬಂಡಿಯೊಳಗೆ? ಬಾ ನಮ್ಮ ಹತ್ತಿರ. ಬಾ, ಬಾ!" ಎಂದು ಗಟ್ಟಿಯಾಗಿ ಕಿರಿಚಿತು.

ಪಿಶಾಚಿಯನ್ನು ನೋಡಿ ಗಾಡಿಯೊಳಗಿದ್ದವರೆಲ್ಲರೂ ಗದಗದ ನಡುಗಿದರು. ಮದುಮಗನ ತಂದೆ ಸ್ವಲ್ಪ

ಧೈರ್ಯ ತಂದುಕೊಂಡು, "ನಾವು ಪಿಶಾಚಿಗಳಲ್ಲ, ಮಾನವರು. ಮದುವೆಯಾಗಿ ಸೊಸೆಯನ್ನು ಕರೆದು ಕೊಂಡು ಹೋಗುತ್ತಿದ್ದೇವೆ. ಮುಹೂರ್ತ ನೋಡಿ ಹೊರಡುವಾಗ ಸ್ವಲ್ಪ ತಡವಾದುದರಿಂದ ರಾತ್ರಿಯಾಯಿತು. ನಮ್ಮನ್ನು ಸುಮ್ಮನೆ ತೊಂದರೆ ಪಡಿಸಬೇಡ. ಹೋಗಲು ಬಿಡು" ಎಂದನು ನಡುಗುವ ದನಿಯಿಂದ.

"ಆ ಪಿಶಾಚೀನ ಇತ್ತ ಹಾಕಿ ಮುಂದೆ ಹೋಗಿ" ಎಂದಿತು ಪಿಶಾಚಿ ಗಾಡಿಯಲ್ಲಿರುವ ಗಂಟುಗಳನ್ನು ತೋರಿಸುತ್ತ.

"ಲಡ್ಡೂ ಹೋಳಿಗೆಗಳ ಗಂಟು ಕೇಳುವಿಯಾ? ಕೊಡುತ್ತೇವೆ. ತಿಂದು ತೃಪ್ತಿಪಡು ಪಿಶಾಚಯ್ಯಾ!" ಎಂದಳು ವರನ ತಾಯಿ.

"ಅಂಥಾದ್ದೆಲ್ಲಾ ನಾವು ತಿನ್ನೋಲ್ಲ. ಅದೋ ಕಾಣುತ್ತಿದೆ ಪಿಶಾಚಿ! ಎತ್ತಿ ಹಾಕ್ರೀ ಕೆಳಗೇ!" ಎಂದು ಮುಂದೆ ಬಂದಿತು ಪಿಶಾಚಿ.

"ಇವಳು ನಮ್ಮ ಸೊಸೆ. ಸುಭಾಷಿಣಿ! ನಿನ್ನ ಮೋರೆ ಸ್ವಲ್ಪ ಸರಿಯಾಗಿ ತೋರಿಸೇ ತಾಯಿ" ಎಂದಳು ವರನ ತಾಯಿ.

ಪಿಶಾಚಿ ಗಲಗಲನೆ ನಕ್ಕು, "ಇನ್ನೂ ತಿಳೀಲಿಲ್ವೇ ನಿಮಗೆ? ನನಗೆ ಬೇಕಾದ್ದು ನಿಮ್ಮ ವರದಕ್ಷಿಣೇ ಪಿಶಾಚಿ. ಆ ಗಂಟಿನೊಳಗೆ ಇಟ್ಟುಕೋಡಿದ್ದೀರಲ್ಲಾ ಅದು! ಹಾಕಿರಿತ್ತ, ಹಾಕಿರಿ! ಇಲ್ಲದಿದ್ದರೆ ನಿಮ್ಮನ್ನೆಲ್ಲಾ ಅಪ್ಪಳಿಸಿಬಿಡುತ್ತೇನೆ" ಎಂದಿತು ಪಿಶಾಚಿ.

ವರನ ತಂದೆ ಹಿಂದೆ ಮುಂದೆ ನೋಡುವಾಗ ಪಿಶಾಚಿ ಹಣದ ಗಂಟನ್ನು ಕಿತ್ತುಕೊಂಡು, "ನೀವು ಮನುಷ್ಯರಾಗಿ ವರದಕ್ಷಿಣೇ ಪಿಶಾಚೀನ ಕಟ್ಟಿಕೊಂಡು, ಹೆಣ್ಣು ಹೆತ್ತವರನ್ನು ಪೀಡಿಸುತ್ತಾ ಇರೋದು, ನೋಡಿದರೆ ನಿಮಗಿಂತ ನಾವೇ ವಾಸಿ. ಇದು ನನ್ನ ಹತ್ತಿರವೇ ಇರಲಿ. ಬೇರೆ ಯಾರಿಗಾದರೂ ಬುದ್ಧಿ ಕಲಿಸಲಿಕ್ಕಾಯಿತು!" ಎಂದು ಹೇಳಿ ಹಣದ ಗಂಟಿನೊಂದಿಗೆ ಮಾಯವಾಯಿತು.

ಈ ವರನ ತಂದೆ ಗೋವಿಂದಯ್ಯನ ಸ್ನೇಹಿತ ಸುದರ್ಶನನ ಅಂಗಡಿಯಿಂದ ಸಾಮಾನು ತೆಗೆದುಕೊಂಡು ಮೂರು ಸಾವಿರದವರೆಗೆ ಸಾಲ ಮಾಡಿದ್ದನು. ಮಗನ ಮದುವೆಗೆ ಬರುವ ವರದಕ್ಷಿಣೆಯ ಹಣದಿಂದ ಆ ಸಾಲ ತೀರಿಸುವೆನೆಂದು ಅವನಿಗೆ ಭರವಸೆ ಕೊಟ್ಟಿದ್ದನು. ಇನ್ನು ಯಾವುದಾದರೂ ನಗಗಳನ್ನು ಮಾರಿ ಸುದರ್ಶನನ ಸಾಲ ತೀರಿಸಬೇಕಾಗುವುದೆಂದು ಚಿಂತಿಸತೊಡಗಿದನು ವರನ ತಂದೆ. ಪಿಶಾಚಿ ಹೇಳಿದ ಮಾತು ಅವರೆಲ್ಲರ ಮನಸ್ಸಿಗೂ ತಾಗಿತ್ತು. ಮನೆ ಸೇರುವಾಗ ಪಿಶಾಚಿ ಬಿಟ್ಟುಹೋದ ಹಾಗೆ ಎಲ್ಲರ ಮನಸ್ಸೂ ತಿಳಿಯಾಗಿತ್ತು.





# ದಿಗಿಲು ಮೊಗದವನು

ಒಂದು ಊರಿನಲ್ಲಿ ರಾಮನೆಂಬವನಿಗೆ ಹದಿನಾರು ವಯಸ್ಸಿನ ತಾರುಣ್ಯವು ಬಂದರೂ, ಚಿಕ್ಕಂದಿನಿಂದಲೂ ಅವನ ಮುಖದಲ್ಲಿ ಅಂಟಿಕೊಂಡಿದ್ದ ದಿಗಿಲಿನ ಭಾವನೆ ಹೋಗಲೇ ಇಲ್ಲ. ಯಾವಾಗಲೂ ಅದಾವುದನ್ನೋ ನೆನೆದುಕೊಂಡು ದಿಗಿಲಿನಿಂದ ಯೋಚಿಸಿಕೊಂಡಿರುವುದು ಅವನ ಅಭ್ಯಾಸವಾಗಿ ಹೋಗಿತ್ತು. ಅವನಿಗೆ ತಂದೆಯ ಸೊತ್ತು ಅಲ್ಪ ಸ್ವಲ್ಪ ಇದ್ದರೂ, ತಂದೆತಾಯಿಗಳಿರಲಿಲ್ಲ. ತಬ್ಬಲಿಯಾಗಿದ್ದನು.

ಒಂದು ದಿನ ಅವನು ದಿಗಿಲು ಬಡಿದವನಾಗಿ, ಊರ ಹೊರಗಿನ ಕೆರೆಯ ದಂಡೆಯ ಮೇಲೆ ಕುಳಿತುಕೊಂಡಿದ್ದನು. ಆಗ ಒಬ್ಬ ಕಳ್ಳನು ಜಮೀನ್ದಾರರ ನಾಲ್ಕು ವಯಸ್ಸಿನ ಮಗನನ್ನು ಎತ್ತಿಕೊಂಡು ಬೇಗ ಬೇಗನೆ ಹೋಗುವುದನ್ನು ನೋಡಿದನು. ಅಳುವ ಹುಡುಗನನ್ನು ಆಮುಕಿ ಹಿಡಿದು ಬಾಯಿಯನ್ನು ಒತ್ತೊತ್ತಿ ಪೀಡಿಸುತ್ತಿದ್ದನು ಆ ಕಳ್ಳ.

ರಾಮನು ದಿಗಿಲು ಮೊಗದವನಾದರೂ ಅವನಲ್ಲಿ ಧೈರ್ಯವೂ ದೇಹ ಶಕ್ತಿಯೂ ಚೆನ್ನಾಗಿಯೇ ಇದ್ದುವು. ಅವನು ಓಡಿಹೋಗಿ ಕಳ್ಳನನ್ನು ಅಟಕಾಯಿಸಿ, ಜುಟ್ಟು ಹಿಡಿದು ಬಗ್ಗಿಸಿ ನಾಲ್ಕಾರು ಗುದ್ದುಗಳನ್ನು ಹಾಕುತ್ತಲೇ ಕಳ್ಳನು ಪ್ರತಿಭಟಿಸಲಾಗದೆ, ಹುಡುಗನನ್ನು ನೆಲದಲ್ಲಿ ಬಿಟ್ಟು ವೇಗವಾಗಿ ಹಿಂದಿರುಗಿ ನೋಡದೆ ಓಡಿಹೋದನು.

ರಾಮನು ಆ ಹುಡುಗನನ್ನು ಎತ್ತಿಕೊಂಡು ಹೋಗಿ, ಜಮೀನ್ದಾರರಿಗೆ ಒಪ್ಪಿಸಿ, ನಡೆದ ಸಂಗತಿಯನ್ನು ಹೇಳಿದನು.

ಆದುವರೆಗೂ ಜಮೀನ್ದಾರರಿಗೆ ತಮ್ಮ ಮಗನನ್ನು ಯಾವನೋ ಎತ್ತಿಕೊಂಡು ಹೋದ ಸಂಗತಿ ತಿಳಿದಿರಲಿಲ್ಲ. ಹುಡುಗನು ಎಲ್ಲೋ ಆಡುತ್ತಿದ್ದಾನೆಂದೇ ಭಾವಿಸಿದ್ದರು. ಅಂತಲೇ ಜಮೀನ್ದಾರರು ರಾಮನನ್ನು ಮೆಚ್ಚಿಕೊಂಡು, ತನ್ನ ಆಳುಗಳಿಗೆ ಸ್ವಲ್ಪ ಬೈದು, ರಾಮನಿಗೆ ಒಂದು ಚಿನ್ನದ ನಾಣ್ಯವನ್ನು ಬಹುಮಾನವಾಗಿ ಕೊಟ್ಟರು.

ಆ ಪವನನ್ನು ಏನು ಮಾಡಬೇಕೆಂದು ರಾಮನಿಗೆ ತಿಳಿಯಲಿಲ್ಲ. ಸ್ವಲ್ಪ ಹೊತ್ತು ಏನೋ ಗಹನವಾಗಿ ಆಲೋಚನೆ ಮಾಡಿ, ಕೆರೆಯ ದಂಡೆಯ ಮೇಲೆ ಒಂದು ಸ್ಥಳದಲ್ಲಿ ಅದನ್ನು ಹುಗಿದಿಟ್ಟನು. ಗುರುತಿಗಾಗಿ ಅದರ ಮೇಲೊಂದು ಗಿಡವನ್ನೂ ನೆಟ್ಟನು.

**ಜಿ. ಆರ್. ಲಕ್ಷ್ಮಿ**



ಕೆಲವು ದಿನಗಳು ಕಳೆದ ಮೇಲೆ ಆ ದೇಶವನ್ನಾಳುವ ರಾಜನು ದೇಶ ಸಂಚಾರ ಮಾಡುತ್ತ, ರಾಮನಿರುವ ಊರಿಗೆ ಚಿತ್ತಯಿಸಿದನು. ಗ್ರಾಮಾಧಿಕಾರಿ ರಾಜನಿಗೆ ಸೇವೆ ಮಾಡಲಿಕ್ಕಾಗಿ ರಾಮನನ್ನು ನಿಯಮಿಸಿದನು. ರಾಮನು ಮಾಡುವ ಶ್ರದ್ಧಾಪೂರ್ವಕವಾದ ಸೇವೆಗಳಿಂದ, ಸಪರ್ಯೆಗಳಿಂದ, ರಾಜನು ಬಹಳ ಮೆಚ್ಚಿದನು. ರಾಮನ ತಿಳುವಳಿಕೆಯಿಂದ ಮಾಡುವ ಕೆಲಸಗಳೆಲ್ಲ ರಾಜನಿಗೆ ತುಂಬಾ ಹಿಡಿಸಿದುವು.

ರಾಜನು ರಾಮನನ್ನು ನೋಡಿ, "ನೀನು ನನಗೆ ತುಂಬಾ ಹಿಡಿಸುವಂತೆ ಕೆಲಸ ಮಾಡುವಿ. ನಿನಗೆ ಏನು ಬೇಕೋ ಕೇಳು, ಕೊಡುತ್ತೇನೆ" ಎಂದನು.

ರಾಮನು ವಿನಯದಿಂದ, "ಅದೇನೋ ತಿಳಿಯದು ಮಹಾಪ್ರಭೂ. ನನ್ನ ಮನಸ್ಸು ಯಾವಾಗಲೂ ಏನೋ ಚಿಂತೆಯಿಂದ ದಿಗಿಲುಹಿಡಿದೇ ಇರುತ್ತದೆ. ಎಲ್ಲರ ಹಾಗೆ ಸಂತೋಷವಾಗಿರಲು ನನ್ನಿಂದ ಸಾಧ್ಯವಾಗುವುದಿಲ್ಲ. ಅದು ನನ್ನಿಂದ ಸಾಧ್ಯವಾಗುವ ಹಾಗೆ ನಾನೇನು ಮಾಡಬೇಕೋ ತಾವು ಹೇಳಬೇಕು. ಅಷ್ಟೇ. ಮತ್ತೇನೂ ಬೇಡ ಪ್ರಭೂ" ಎಂದನು.

"ಚಿಕ್ಕ ಚಿಕ್ಕ ವಿಷಯಗಳನ್ನು ದೊಡ್ಡದು ಮಾಡಿಕೊಂಡು ಬಾಧೆ ಪಡುವವರು ಯಾವಾಗಲೂ ದಿಗಿಲಿನಿಂದಲೇ ಇರುತ್ತಾರೆ. ಈ ಪ್ರಪಂಚದಲ್ಲಿ ಯಾವ ಪಕ್ಷಿಯೋ, ಮೃಗವೋ ಆಗಿ ಹುಟ್ಟದೆ, ಮನುಷ್ಯನಾಗಿ ಹುಟ್ಟಿದುದಕ್ಕೆ ಪ್ರತಿಯೊಬ್ಬನೂ ಸಂತೋಷಪಡಲೇ ಬೇಕು. ಮನುಷ್ಯನಾದ ನೀನು ಚಿಂತಿಸಲೇ ಬಾರದು" ಎಂದನು ರಾಜ.

ರಾಮನು ಒಂದು ಕ್ಷಣ ಆಲೋಚನೆ ಮಾಡಿ, "ಒಂದು ಚಿಕ್ಕ ಸಂಗತಿ ಪ್ರಭೂ. ನಮ್ಮ ಗ್ರಾಮದಲ್ಲಿ ಪ್ರತಿಯೊಬ್ಬರೂ ಎಲ್ಲಿಗೋ ಊರಿಗೆ ಹೋಗಿ ಕೆಲವು ದಿನ ಇದ್ದು ಬರುತ್ತಾರೆ. ನನಗೆ ಎಲ್ಲಿಯೂ ಯಾರೂ ಕರೆಯುವವರೇ ಇಲ್ಲ. ಯಾವಾಗಲೂ ಈ ಊರನ್ನೇ ಹಿಡಿದುಕೊಂಡಿರಬೇಕಾಗಿ ಬಂದುದರಿಂದಲೇ ನನಗೆ ಸಂತೋಷವಿಲ್ಲವೆಂದು ಅನುಮಾನವಾಗಿದೆ" ಎಂದನು.

ಅವನ ಮಾತು ಕೇಳಿ ರಾಜನಿಗೆ ರಾಮನ ಮೇಲೆ ಕನಿಕರವುಂಟಾಯಿತು. ರಾಜನು ವಾತ್ಸಲ್ಯದ ದನಿಯಿಂದ, "ಸರಿ, ಇನ್ನು ಮೇಲೆ ನೀನೇನೂ ದಿಗಿಲು ಪಡಬೇಕಾಗಿಲ್ಲ. ನಿನಗೆ ಯಾರೂ ಇಲ್ಲವೆಂದು ಅಂದುಕೊಳ್ಳಬೇಡ. ನಾನೇ ನಿನಗೊಬ್ಬ ಬಂಧು ಎಂದು ತಿಳಿ. ಈಗ ನಿನ್ನನ್ನು ನನ್ನೊಂದಿಗೆ ರಾಜಧಾನಿಗೆ ಕರೆದುಕೊಂಡು ಹೋಗುತ್ತೇನೆ. ನಿನಗೆ ಇಷ್ಟ ಬಂದಷ್ಟು ದಿನಗಳು ಅಲ್ಲಿದ್ದು, ಅಲ್ಲಿರುವ ಚಿತ್ರವಿಚಿತ್ರಗಳನ್ನು ನೋಡಿ ವಿನೋದಿಸು. ನಿನಗೆ ಅಲ್ಲಿಯೇ ಇರಬೇಕೆಂದು ತೋರಿದರೂ ಸರಿಯೇ, ಇಲ್ಲದಿದ್ದರೆ ನಿನ್ನನ್ನು ನಿನ್ನ ಊರಿಗೇ ಭದ್ರವಾಗಿ ಹಿಂದಿರುಗಿಸಿಬಿಡುತ್ತೇನೆ" ಎಂದನು. ರಾಜನ ಮಾತುಗಳನ್ನು ಕೇಳಿ ರಾಮನಿಗೆ ಬಹಳ ಉತ್ಸಾಹ

ವಾಯಿತು. ಅವನು ರಾಜನ ಜತೆಯಲ್ಲಿ ರಾಜಧಾನಿಗೆ ಹೋಗಿ ಕೆಲವು ದಿನಗಳ ವರೆಗೆ ಅಲ್ಲಿಯ ವಿನೋದಗಳನ್ನು ನೋಡಬಹುದೆಂದುಕೊಂಡನು.

ಆ ಸಮಯದಲ್ಲಿ ಅವನಿಗೆ ತಾನು ಊರ ಹೊರಗಿನ ಕೆರೆಯ ದಂಡೆಯಲ್ಲಿ ಹುಗಿದಿಟ್ಟ ಚಿನ್ನದ ನಾಣ್ಯದ ನೆನಪಾಯಿತು. ರಾಜಧಾನಿಯಲ್ಲಿ ತನ್ನ ಖರ್ಚಿಗಾಗಿ ಅದನ್ನು ಕೈಯಲ್ಲಿಟ್ಟುಕೊಳ್ಳುವುದು ಒಳ್ಳೆಯದೆಂದುಕೊಂಡು, ಅವನು ಕೆರೆಯ ದಂಡೆಗೆ ಹೋದನು.

ಆದರೆ ಅಲ್ಲಿ ಗುರುತಿಗಾಗಿ ನೆಟ್ಟ ಗಿಡವು ಕಾಣಲಿಲ್ಲ. ಯಾವ ಪಶುವೋ ಅದನ್ನು ತಿಂದುಬಿಟ್ಟಿತ್ತು. ಆದುದರಿಂದ ತಾನು ನಾಣ್ಯವನ್ನು ಎಲ್ಲಿ ಹುಗಿದಿಟ್ಟಿದ್ದೇನೆಂಬುದು ಅವನಿಗೆ ಗೊತ್ತಾಗಲಿಲ್ಲ. ಗುರುತಾಗಿ ಊಹಿಸಿಕೊಂಡ ಜಾಗದಲ್ಲಿ ಅಗೆದು ನೋಡಿದನು. ಅಲ್ಲಿ ಏನೂ ಇರಲಿಲ್ಲ. ಅಕ್ಕಪಕ್ಕದಲ್ಲಿಯೂ ಅಷ್ಟೇ. ಇದರಿಂದ ಅವನ ಮನಸ್ಸು ಬಹಳವಾಗಿ ಕಲಕಿ ಹೋಯಿತು.

ಅದಕ್ಕೆ ಮೊದಲು ತುಂಬಾ ಉತ್ಸಾಹದಲ್ಲಿದ್ದ ರಾಮನು ಮತ್ತೆ ದಿಗಿಲಿನ ರಾಶಿಯೇ ಬಡಿದು ಕಂದಿಹೋದ ಮುಖದಲ್ಲಿರುವುದನ್ನು ಗಮನಿಸಿದ ರಾಜನು, "ಏನಪ್ಪಾ ರಾಮಾ, ಊರು ಬಿಟ್ಟು ಹೋಗಲಿಕ್ಕೆ ಚಿಂತೆಯಾಗಿದೆಯೋ ?" ಎಂದು ಕೇಳಿದನು.

"ಅದೇನಿಲ್ಲ ಪ್ರಭೂ. ರಾಜಧಾನಿಗೆ ಹೋಗುವಾಗ ನನ್ನೊಂದಿಗೆ ನಾನು ಸೇರಿಸಿಟ್ಟ ಧನವನ್ನು ಕೂಡಾ ತೆಗೆದುಕೊಳ್ಳೋಣವೆಂದು ಮಾಡಿದೆ. ಅದನ್ನೆಲ್ಲ ಕೆರೆಯ ದಂಡೆಯಲ್ಲಿ ಹುಗಿದಿಟ್ಟಿದ್ದೆ. ಆದರೆ ಈಗ ಎಲ್ಲಿ ಹುಗಿದೆನೆಂದು ಗೊತ್ತಾಗುವುದಿಲ್ಲ. ಅದೇ ಚಿಂತೆ" ಎಂದನು ರಾಮ.

"ಹಣವನ್ನು ಕುರಿತು ನೀನೇನೂ ಚಿಂತಿಸಬೇಡ. ನಿನಗೆ ಬೇಕಾದಷ್ಟು ಧನ ನಾನೇ ಕೊಡುತ್ತೇನೆ" ಎಂದನು ರಾಜ.

"ಅದು ಬಹಳ ಸಂತೋಷವೇ ಹೌದು. ಆದರೆ ನಾನು ಕಷ್ಟಪಟ್ಟು ಸಂಪಾದಿಸಿದ ಹಣ ಕಾಣದೆ





ಹೋಗುವುದು ಬಹಳ ಚಿಂತೆಯಾಗಿದೆ. ಅದನ್ನು ಕಂಡುಹಿಡಿಯದೆ ಆ ಚಿಂತೆ ಹೋಗುವುದಿಲ್ಲ ಮಹಾಪ್ರಭೂ" ಎಂದನು ರಾಮ.

ಅವನ ಮಾತು ಕೇಳಿ ರಾಜನು ಆಶ್ಚರ್ಯಪಡುತ್ತ, "ಆ ಹಣವು ಕಾಣುವುದಿಲ್ಲವೆಂದು ಇಷ್ಟು ಚಿಂತೆ ಪಡಲಿಕ್ಕೆ, ಅಲ್ಲಿ ಎಷ್ಟು ಹುಗಿದಿಟ್ಟಿದ್ದೀಯಪ್ಪಾ ?" ಎಂದು ಕೇಳಿದನು.

ಒಂದೇ ಒಂದು ಚಿನ್ನದ ನಾಣ್ಯವೆಂದು ಹೇಳಲು ಬಾಯಿ ತೆರೆದು ತಡೆದುಕೊಂಡನು ರಾಮ. ಹಾಗೆ ಹೇಳಿದರೆ ತಾನು ಬಹಳ ಚಿಕ್ಕ ಮೊತ್ತಕ್ಕೆ ದಿಗಿಲು ಪಡುವುದಾಗಿ ರಾಜನು ಅಂದುಕೊಳ್ಳುತ್ತಾನೆ. ಅದಕ್ಕೆ ಬದಲು ಹೆಚ್ಚು ಹಣ ಕಳೆದುಹೋಯಿತೆಂದು ರಾಜನು ನಂಬುವುದೇ ಒಳ್ಳೇದು.

ಹೀಗಂದುಕೊಂಡು ರಾಮನು ರಾಜನೊಡನೆ, "ನೂರು ಚಿನ್ನದ ಪವನುಗಳು ಪ್ರಭೂ" ಎಂದು ಹೇಳಿಬಿಟ್ಟನು.

ರಾಜನು ಅವನ ಮೇಲೆ ಬಹಳ ದಯಾವಂತನಾಗಿ, "ಸರಿ. ಚಿಂತೆ ಮಾಡಬೇಡ. ಭೂಮಿಯ ಅಡಿಯಲ್ಲಿ ಎಲ್ಲಿ ಬಂಗಾರವಿದ್ದರೂ ನನಗೆ ಗೊತ್ತಾಗಿಬಿಡುತ್ತದೆ. ಸಾಯಂಕಾಲದಲ್ಲಿ ನಾವು ಕೆರೆಯ ದಂಡೆಗೆ ಹೋಗೋಣ" ಎಂದನು.

ರಾಜನು ಹೇಳಿದುದನ್ನು ಕೇಳಿ ರಾಮನಿಗೆ ಸಂತೋಷವಾಯಿತು. ಇಷ್ಟರೊಳಗೆ ರಾಜನು ತನ್ನ ಸೇವಕನೊಬ್ಬನ ಮೂಲಕ, ಕೆರೆಯ ದಂಡೆಯಲ್ಲಿ ನೂರು ಚಿನ್ನದ ಪವನುಗಳನ್ನು ಹುಗಿಸಿ, ಗುರುತು ತಿಳಿಯದಂತೆ ಮಾಡಿಸಿಟ್ಟನು.

ಸಾಯಂಕಾಲ ರಾಮನನ್ನು ಕರೆದುಕೊಂಡು ಕೆರೆಯ ದಂಡೆಗೆ ಹೋಗಿ ರಾಜನು ಅಲ್ಲಿ ಇಲ್ಲಿ ನೋಡಿದಂತೆ ಮಾಡಿ, ಹುಗಿದಿಟ್ಟ ಜಾಗವನ್ನು ಅವನಿಗೆ ತೋರಿಸುತ್ತ, "ಇಕೋ ಇಲ್ಲಿ ಅಗೆ" ಎಂದನು.

ರಾಮನು ಅಲ್ಲಿ ಅಗೆವಾಗ ನೂರು ಚಿನ್ನದ ಪವನುಗಳು ಸಿಕ್ಕಿದುವು.

"ಸರಿಯಾಗಿವೆಯೋ ಎಣಿಸಿ ನೋಡಪ್ಪಾ." ಎಂದನು ರಾಜ.

ನೂರು ಚಿನ್ನದ ನಾಣ್ಯಗಳನ್ನು ನೋಡಿದ ಕೂಡಲೇ ರಾಮನ ಮುಖದಲ್ಲಿ ಇನ್ನಷ್ಟು ದಿಗಿಲಿನ ಛಾಯೆ ಕವಿಯುವುದನ್ನು ರಾಜನು ನೋಡಿದನು. ಆದುದರಿಂದ ಆಶ್ಚರ್ಯಪಟ್ಟು, "ಇದೇನು ? ನಿನ್ನ ಹಣ ದೊರಕಿದುದಕ್ಕೆ ಸಂತೋಷಪಡುವುದಕ್ಕೆ ಬದಲಾಗಿ ದಿಗಿಲಿನಿಂದಲೇ ಇರುವಿಯೇಕೆ?" ಎಂದನು.

ರಾಮನು ರಾಜನ ಕಾಲ ಮೇಲೆ ಅಡ್ಡಬಿದ್ದು, "ನನ್ನನ್ನು ಕ್ಷಮಿಸಬೇಕು ಮಹಾಪ್ರಭೂ. ಈ ಹಣವು ನನ್ನದು ಅಲ್ಲ, ಬಹು ಚಿಕ್ಕ ಮೊತ್ತಕ್ಕಾಗಿ ದಿಗಿಲು ಪಡುವೆನೆಂದು ನೀವು ಅಂದುಕೊಂಡು ಗೇಲಿಮಾಡುವಿರೇನೋ ಎಂದು ಹೆದರಿ, ಸುಳ್ಳು ಹೇಳಿಬಿಟ್ಟೆ. ನಾನು ಹುಗಿದಿಟ್ಟಿದ್ದು ಒಂದೇ ಒಂದು ಚಿನ್ನದ ಪವನು" ಎಂದನು.

"ಹಾಗೇನು? ಸರಿ ಸರಿ. ಇದೆಲ್ಲ ಯಾರದಾದ ರೇನಾಯಿತು? ನಿನಗೆ ದೊರಕಿದೆಯಷ್ಟೆ? ರಾಜ ನಾದ ನಾನೇ ಹೇಳುತ್ತೇನೆ. ಇನ್ನು ಇದೆಲ್ಲವೂ ನಿನ್ನದೇ" ಎಂದನು ರಾಜ.

"ಈ ಧನ ನನಗೆ ಬೇಡ ಪ್ರಭೂ, ಒಂದು ನಾಣ್ಯ ಕಳೆದುಹೋದುದಕ್ಕೇ ನಾನು ಇಷ್ಟು ದೊಡ್ಡ ಸಂಕಟದಲ್ಲಿರುವಾಗ, ನೂರು ನಾಣ್ಯ ಕಳೆದು ಹೋಗುವುದೆಂದರೆ ಇದರ ಯಜಮಾನನಿಗೆ ಇನ್ನೆಷ್ಟು ಸಂಕಟವಾಗುವುದೋ! ಇನ್ನೊಬ್ಬರ ಹಣ ನನಗೆ ಬೇಡ ಪ್ರಭೂ" ಎಂದು ರಾಮನು ಖಂಡಿತವಾಗಿ ಹೇಳಿದನು.

ರಾಮನ ಸದ್ಬುದ್ಧಿಯನ್ನು ನೋಡಿ ರಾಜನು ಬಹಳ ಹರ್ಷಿತನಾದನು. "ಆ ಹಣ ನನ್ನದೇ ರಾಮಾ. ನಿನಗಾಗಿ ನಾನೇ ಅದನ್ನು ಅಲ್ಲಿ ಹುಗಿದಿಡಿಸಿದೆ" ಎಂದನು ಮುಗುಳು ನಗುತ್ತಾ ರಾಜ.

"ಹಾಗಾದರೆ ಮಹಾಪ್ರಸಾದವೆಂದು ಸ್ವೀಕರಿಸುತ್ತೇನೆ ಮಹಾಪ್ರಭೂ" ಎಂದು ರಾಮನು ಅದನ್ನು ಸ್ವೀಕರಿಸಿಕೊಂಡನು.

"ರಾಮಾ, ನೀನು ಬಹಳ ಒಳ್ಳೆಯವನು. ತುಂಬಾ ನಂಬುಗಸ್ಥನು, ನನ್ನ ದರಬಾರಿನಲ್ಲಿ ನಿನಗೆ ಒಳ್ಳೆಯ ಉದ್ಯೋಗವನ್ನು ಕೊಡುತ್ತೇನೆ, ಮತ್ತೆ ನಿನ್ನ ಜೀವನದಲ್ಲಿ ದಿಗಿಲೆಂಬ ಮಾತಿಗೆ ಜಾಗಿಲ್ಲದಂತೆ ಮಾಡುತ್ತೇನೆ, ನೀನು ಯಾವಾಗಲೂ ಸಂತೋಷವಾಗಿರಬೇಕೆಂಬುದೇ ನನ್ನ ಕೋರಿಕೆ" ಎಂದನು ರಾಜ.

"ಹಾಗೆಯೇ ಆಗಲಿ ಪ್ರಭೂ. ಬಹಳ ಸಂತೋಷ" ಎಂದನು ರಾಮ.

ಆದರೆ ರಾಮನ ಮುಖದಲ್ಲೆಲ್ಲಿಯೂ ಸಂತೋಷದ ಲಕ್ಷಣವೇನೂ ಹೊರಡಲಿಲ್ಲ. ಅದರ ಮೇಲೆ ಇನ್ನಷ್ಟು ದಿಗಿಲಿರುವಂತೆಯೇ ಕಾಣುತ್ತಿತ್ತು, ರಾಜನು ಅವನೊಂದಿಗೆ "ನಿನ್ನನ್ನು ಇನ್ನೂ ದಿಗಿಲು ಬಿಟ್ಟು ಹೋಗಲಿಲ್ಲ, ಏಕೆ?" ಎಂದು ಕೇಳಿದನು.

"ಇನ್ನೆಲ್ಲಿಯ ದಿಗಿಲು ಬರಬೇಕು! ಇರುವ ದಿಗಿಲಿಗೇ ಜಾಗವಿಲ್ಲ!" ಎಂದು ಶುಷ್ಕ ನಗುವಿನೊಂದಿಗೆ, "ಈ ಜನ್ಮದಲ್ಲಿ ನನ್ನದೊಂದು ಚಿನ್ನದ ಪವನು ದೊರಕಲಾರದೆಂದೇ ಕಾಣುತ್ತದೆ. ಈ ಊರಲ್ಲೇ ಇದ್ದರೆ ದಿನಾ ಕೆರೆಯ ದಂಡೆಯಲ್ಲಿ ಅದನ್ನು ಹುಡುಕುತ್ತಾ ಇದ್ದೇನು" ಎಂದನು.

ರಾಮನ ದಿಗಿಲಿಗೆ ಕಾರಣವಾದ ಚಿಂತೆಯನ್ನು ಹೋಗಲಾಡಿಸಲು ಸಾಧ್ಯವಿಲ್ಲವೆಂದು, ಅದು ಅವನು ಹುಟ್ಟುವಾಗಲೇ ಅಂಟಿಕೊಂಡ ಗುಣವೆಂದು ತಿಳಿದು ರಾಜನು ಅವನನ್ನು ರಾಜಧಾನಿಗೆ ಕರೆದೊಯ್ಯುವ ಆಲೋಚನೆಯನ್ನು ಬಿಟ್ಟನು. ಇದ್ದ ಊರಲ್ಲೇ ಅವನು ಚೆನ್ನಾಗಿಯೇ ಬಾಳಿದರೂ, ದಿಗಿಲು ರಾಮನೆಂದೇ ಹೆಸರು ಪಡೆದನು.





# ಪಂಡಿತನ ಉನ್ನತಿ

ಬಾಗ್ದಾದು ನಗರವನ್ನು ಪಾಲಿಸಿದ ಖಲೀಫರಲ್ಲಿ ಅಲ್‌ಮಮೂನ್ ಖಲೀಫನು ಬಹುದೊಡ್ಡ ಪಂಡಿತ ಪೋಷಕನೆಂದು ಖ್ಯಾತನಾಗಿದ್ದನು. ಅವನು ಸಣ್ಣ, ದೊಡ್ಡ ತಾರತಮ್ಯವಿಲ್ಲದೆ ಅರ್ಹರಾದ ಪಂಡಿತರನ್ನು ಅವರವರಿಗೆ ತಕ್ಕ ಹಾಗೆ ಬಿರುದುಗಳನ್ನಿತ್ತು ಸತ್ಕಾರ ಮಾಡಿ ಪ್ರೋತ್ಸಾಹಿಸುತ್ತಿದ್ದನು.

ಅಲ್‌ಮಮೂನ್ ಖಲೀಫಾ ವಾರಕ್ಕೊಂದು ಸಾರಿ ಸಭೆ ಸೇರಿಸುವ ಪರಿಪಾಠವಿಟ್ಟಿದ್ದನು. ಅದರಲ್ಲಿ ಪಂಡಿತರು ಮಾತ್ರವಲ್ಲದೆ, ವಿವೇಕವೂ, ವಾಕ್ಚಾತುರ್ಯವೂ ಇರುವವರು ಕೂಡಾ ಭಾಗವಹಿಸಬಹುದಾಗಿತ್ತು. ಅಂತಹ ಪಂಡಿತ ಸಭೆಯಲ್ಲಿ ಅನೇಕ ವಿಷಯಗಳನ್ನು ಕುರಿತು ಚರ್ಚೆ ನಡೆಯುತ್ತಿತ್ತು. ದೊಡ್ಡ ದೊಡ್ಡ ಉದ್ದಂಡರಷ್ಟೇ ಕಠಿಣ ಸಮಸ್ಯೆಗಳ ಚರ್ಚೆಯಲ್ಲಿ ಪಾಲುಗೊಳ್ಳುತ್ತಿದ್ದರು. ಸಭೆಗೆ ಬಂದ ಸಾಮಾನ್ಯ ಜನರಿಗೆ ಆ ಚರ್ಚೆಗಳ ಮೂಲಕವಾಗಿ ಅನೇಕ ವಿಷಯಗಳನ್ನು ತಿಳಿದುಕೊಳ್ಳುವ ಅವಕಾಶವಾಗುತ್ತಿತ್ತು.

ಒಂದು ದಿನ ಅಲ್‌ಮಮೂನ್ ಖಲೀಫನು ಪಂಡಿತರ ಸಭೆ ನಡೆಸಿಕೊಂಡಿದ್ದನು. ಆಗ ಹೊಸಬನೊಬ್ಬನು ಆ ಸಭೆಯೊಳಗೆ ಪ್ರವೇಶಿಸಿ, ಸಾಮಾನ್ಯ ಪ್ರಜೆಗಳ ನಡುವೆ ಕುಳಿತುಕೊಳ್ಳುವುದನ್ನು ಬಿಟ್ಟು, ನೆಟ್ಟಗೆ ಹೋಗಿ ಪಂಡಿತರ ಮಧ್ಯದಲ್ಲೇ ಕುಳಿತುಕೊಂಡನು. ನೋಡಿದವರು ಅವನೊಬ್ಬ ಯಾತ್ರಿಕನೆಂದುಕೊಂಡರೇ ಹೊರತು ಅವನೊಬ್ಬ ಪಂಡಿತನೆಂದು ಯಾರೂ ಅಂದುಕೊಳ್ಳಲಿಲ್ಲ. ಕುಳಿತವರನ್ನು ಎಬ್ಬಿಸುವ ಪರಿಪಾಟಿಯೂ ಇಲ್ಲ.

ಸಭೆಯ ಕಾರ್ಯಕ್ರಮ ಪ್ರಾರಂಭವಾಯಿತು. ಒಬ್ಬೊಬ್ಬ ಪಂಡಿತನೂ ಎದ್ದು, ಆ ದಿನ ಖಲೀಫನು ಪಂಡಿತರ ಚರ್ಚೆಗೆ ಕೊಟ್ಟ ವಿಷಯವನ್ನು ಕುರಿತು ಉಳಿದವರಿಗೆ ಅರ್ಥವಾಗುವ ಹಾಗೆ ಮಾತಾಡತೊಡಗಿದನು. ಹಾಗೆಯೇ ಪ್ರತಿಯೊಬ್ಬನೂ ತನ್ನ ಅಭಿಪ್ರಾಯ ಹೇಳುತ್ತಿರಲು, ಹೊಸತಾಗಿ ಬಂದವನ ಸರದಿ ಬಂತು. ಅವನು ಎದ್ದು ಚರ್ಚಿಸಲ್ಪಡುತ್ತಿರುವ ಅಂಶವನ್ನು ಕುರಿತು ತನ್ನ ಅಭಿಪ್ರಾಯವನ್ನು ಸ್ವಚ್ಛವಾದ ಭಾಷೋಚ್ಚಾರದಿಂದ ಬಹು ಚೆನ್ನಾಗಿ ವಿಪುಲೀಕರಿಸಿ ಮಾತಾಡಿದನು. ಎಲ್ಲರೂ ಒಪ್ಪುವಂತೆ ಅವನು ಹೇಳಿದುದನ್ನು ಕೇಳಿ ಇಡೀ ಸಭೆ ಆಶ್ಚರ್ಯಪಟ್ಟಿತು.

ಖಲೀಫನು ಅವನನ್ನು ಪಂಡಿತರು ಕುಳಿತಿದ್ದ ಮೊದಲನೇ ವರಿಸೆಯಲ್ಲಿ ಕುಳಿತುಕೊಳ್ಳುವಂತೆ ಅಪ್ಪಣೆ ಮಾಡಿದನು. ಅದು ಮುಖ್ಯರಾದ ಉದ್ದಂಡ ಪಂಡಿತರು ಕುಳಿತುಕೊಳ್ಳುವ ಸ್ಥಾನವಾಗಿತ್ತು. ಹೊಸಬನು ಖಲೀಫನ ಕೋರಿಕೆಯಂತೆ ಮುಂದಿನ ವರಿಸೆಗೆ ಬಂದು ಕುಳಿತನು.

ಅನಂತರ ಖಲೀಫನು ಮತ್ತೊಂದು ವಿಷಯವನ್ನು ಕೊಟ್ಟು, ಅದರ ಬಗೆಗೆ ಚರ್ಚಿಸಬೇಕೆಂದು ಕೇಳಿಕೊಂಡನು. ಆ ಚರ್ಚೆಯಲ್ಲಿ ಹೊಸಬನ ಸರದಿ ಬಂದಾಗ, ಮೊದಲನೇ ಸಾರಿಗಿಂತಲೂ ಅದ್ಭುತವೆನಿಸುವಂತೆ ವಿಷಯದೊಳಗಿನ ಹುರುಳನ್ನು ಬಯಲಿಗೆಳೆಯುತ್ತ ಮಾತಾಡಿ ಎಲ್ಲರಿಗೂ ಸಂತೋಷವನ್ನುಂಟುಮಾಡಿದನು. ಪಂಡಿತರೊಂದಿಗೆ ಸಭಿಕರು ಕೂಡಾ ಹರ್ಷಧ್ವನಿ ಮಾಡಿದರು.

ಈ ಸಾರಿ ಖಲೀಫನು ಅವನನ್ನು ತನ್ನ ಮುಖ್ಯ ಮಂತ್ರಿಗಳ ಮಧ್ಯದಲ್ಲಿ ಬಂದು ಕುಳಿತುಕೊಳ್ಳುವಂತೆ ಆಹ್ವಾನ ಮಾಡಿದನು.

ಅನಂತರ ಮತ್ತೊಂದು ವಿಷಯದ ಮೇಲೆ ತರ್ಕವು ಪ್ರಾರಂಭವಾಯಿತು. ಅದರಲ್ಲಿ ಹೊಸಬನು ತನ್ನ ಲೋಕಾನುಭವವನ್ನು, ವಿವೇಕವನ್ನು, ವಾಕ್ಚಾತುರ್ಯದಿಂದ ಹೇಳುತ್ತ ಇಡೀ ಸಭೆಯನ್ನೇ ಮಂತ್ರಮುಗ್ಧ ಮಾಡಿದನು. ಖಲೀಫನು ಬಹಳ ಪ್ರಸನ್ನನಾಗಿ ಅವನನ್ನು ತನ್ನ ಪಕ್ಕದಲ್ಲಿರುವ ಆಸನದ ಮೇಲೆ ಕುಳಿತುಕೊಳ್ಳುವಂತೆ ಕರೆದನು.

ಸಭೆ ಮುಗಿಯಿತು. ಖಲೀಫನು ಪಂಡಿತರಿಗೆಲ್ಲಾ ಊಟ ಕೂಟ ಏರ್ಪಡಿಸಿದ್ದನು. ಅದೆಲ್ಲ ಮುಗಿದ ಮೇಲೆ ಒಬ್ಬೊಬ್ಬರಾಗಿ ಅಲ್ಲಿಂದ ಹೊರಟುಹೋಗಲು ತೊಡಗಿದರು. ಹೊಸಬನು ಕೂಡಾ ಹೊರಡಲು ಎದ್ದನು, ಆಗ ಅಲ್‌ಮಮೂನ್ ಖಲೀಫನು ಅವನ ಭುಜವನ್ನು ತಟ್ಟಿ, "ಸ್ವಲ್ಪ ಇರಿ, ನಿಮಗೆ ಪ್ರತ್ಯೇಕವಾಗಿ ಆತಿಥ್ಯ ಕೊಡಬೇಕೆಂದಿದ್ದೇನೆ. ನಾವಿಬ್ಬರೂ ಕೂಡಿ ದ್ರಾಕ್ಷಾರಸ ಸೇವಿಸೋಣ" ಎಂದನು.

ಖಲೀಫನ ಆಜ್ಞೆಯಾದ ಮರುಕ್ಷಣದಲ್ಲಿ ಅಂತಃಪುರದ ದಾಸಿಯರು ರತ್ನ ಖಚಿತವಾದ ಬಂಗಾರದ



ಪಾತ್ರಗಳ ತುಂಬ ಪಾನೀಯಗಳನ್ನು ತೆಗೆದುಕೊಂಡು ಅಲ್ಲಿಗೆ ಬಂದರು. ಖಲೀಫನು ಒಂದು ಪಾತ್ರವನ್ನು ತಾನು ಎತ್ತಿಕೊಂಡು ಇನ್ನೊಂದನ್ನು ತೆಗೆದುಕೊಳ್ಳುವಂತೆ ಹೊಸಬನಿಗೆ ಸನ್ನಮಾಡಿದನು.

ಹೊಸ ವಿದ್ವಾಂಸನು ಬಹಳ ವಿನಯದಿಂದ ಖಲೀಫನನ್ನು ನೋಡಿ, "ಪ್ರಭುಗಳೇ, ತಾವು ಮುಖ್ಯ ಪಂಡಿತರ ವರಿಸೆಯಲ್ಲಿ ಕುಳಿತುಕೊಳ್ಳುವಂತೆ ನನಗೆ ಏಕೆ ಹೇಳಿದಿರೆಂಬುದನ್ನು ದಯವಿಟ್ಟು ತಿಳಿಸಬೇಕು" ಎಂದನು.

"ನಿಮ್ಮ ವಿವೇಕವೂ, ವಾಕ್ಚಾತುರ್ಯವೂ, ಹೇಳುವ ವಿಷಯ ಅರ್ಥವಾಗುವಂತೆ ಒಂದರಹಿಂದೊಂದಾಗಿ ವಿಭಾಗಿಸಿದ ಕ್ರಮವೂ ನನಗೆ ತುಂಬಾ ಮೆಚ್ಚಿಕೆಯಾಗಿದೆ" ಎಂದನು ಖಲೀಫ.

"ತರುವಾಯ, ತಮ್ಮ ಪಕ್ಕದಲ್ಲಿರುವ ಆಸನದಲ್ಲಿ ಕುಳಿತುಕೊಳ್ಳುವಂತೆ ಏಕೆ ಕೋರಿದಿರಿ?" ಎಂದು ಕೇಳಿದನು ಹೊಸಬ.

"ನಿಮ್ಮ ವಿವೇಕಕ್ಕೂ ವಾಕ್ಚಾತುರ್ಯಕ್ಕೂ ಯಾರೂ ಸಾಟಿ ಇಲ್ಲವೆನಿಸಿತು. ಅದಕ್ಕಿಂತ ಉನ್ನತಾಸನ ಬೇರೆ ಇಲ್ಲದುದರಿಂದ" ಎಂದನು ಖಲೀಫ.

"ಅಂದರೆ ನನ್ನ ವಿವೇಕ ಮತ್ತು ವಾಕ್ಚಾತುರ್ಯಗಳ ಕಾರಣದಿಂದಲೇ ನಾನು ತಮ್ಮ ದಯೆಗೂ ಅಭಿಮಾನಕ್ಕೂ ಪಾತ್ರನಾದೆನೆಂದಾಯಿತು. ಹಾಗಾದರೆ ಈಗ ನನ್ನನ್ನು ಆ ಉನ್ನತ ಸ್ಥಾನದಿಂದ ಏಕೆ ಕೆಳಗಿಳಿಸಲು ನೋಡುವಿರಿ ಪ್ರಭೂ?" ಎಂದು ಕೇಳಿದನು ಹೊಸ ವಿದ್ವಾಂಸ.

"ಹಾಗೇನಾಗಿದೆ? ನೀವು ಹೇಳುವುದು ನನಗೆ ಅರ್ಥವಾಗಿಲ್ಲ" ಎಂದನು ಖಲೀಫ.

"ಪ್ರಭೂ. ತಾವೀಗ ನನಗೆ ಕೊಡಲು ನೋಡುವ ಪಾನೀಯವಿದೆಯಷ್ಟೆ? ಅದು ನನ್ನಲ್ಲಿರುವ ಆ ಎರಡು ಒಳ್ಳೆಯ ಶಕ್ತಿಗಳನ್ನೂ ಪೂರ್ತಿ ಹರಣಮಾಡಿ, ಸರ್ವನಾಶಕ್ಕೆ ದೂಡುತ್ತದೆ. ನನ್ನ ಶಕ್ತಿಗಳನ್ನು ಬಹು ಜಾಗ್ರತೆಯಿಂದ ಕಾಪಾಡಿಕೊಳ್ಳಬೇಕಾದ ಬಾಧ್ಯತೆ ನನಗಿದೆಯಷ್ಟೆ? ಆದುದರಿಂದ ದಯಮಾಡಿ ಆ ಪಾನೀಯವನ್ನು ಸೇವಿಸದೆಯೇ ನಾನು ಇಲ್ಲಿಂದ ಹೋಗಲಿಕ್ಕೆ ಅನುಮತಿ ಕೊಡಬೇಕು" ಎಂದು ಪ್ರಾರ್ಥಿಸಿದನು ಹೊಸಬ.

ಅವನ ಮಾತು ಖಲೀಫನನ್ನು ಬಹಳ ಸಂತೋಷಪಡಿಸಿತು. ಅವನು ಕೂಡಲೇ ಆ ಪಂಡಿತನಿಗೆ ಲಕ್ಷ ಬೆಳ್ಳಿಯ ನಾಣ್ಯಗಳನ್ನೂ, ಬೆಲೆಬಾಳುವ ಬಟ್ಟೆಗಳನ್ನೂ, ಉತ್ತಮ ಜಾತಿಯ ಕುದುರೆಯನ್ನೂ ಬಹುಮಾನ ಕೊಟ್ಟನು.

ಆಮೇಲೆ ನಡೆದ ಪ್ರತಿ ಪಂಡಿತ ಸಭೆಯಲ್ಲಿಯೂ ಆ ಹೊಸ ಪಂಡಿತನಿಗೆ ಅಲ್‌ಮಮೂನ್ ಖಲೀಫನು ಉನ್ನತ ಸ್ಥಾನವನ್ನು ಕೊಟ್ಟು ಗೌರವಿಸುತ್ತಿದ್ದನು.





ಅರಮನೆಯಿಂದ ಹೊರಟ ಸಿದ್ಧಾರ್ಥನು ಕಪಿಲವಸ್ತು ನಗರವನ್ನು ದಾಟಿ ಬಹಳ ದೂರ ಹೋದ ಮೇಲೆ ತನ್ನ ಕುದುರೆಯನ್ನು ನಿಲ್ಲಿಸಿ ಕೆಳಗಿಳಿದನು. ಆಮೇಲೆ ಕತ್ತಿಯನ್ನೂ, ಉತ್ತರೀಯವನ್ನೂ ಶರೀರದ ಮೇಲಿರುವ ಎಲ್ಲಾ ಆಭರಣಗಳನ್ನೂ ತೆಗೆದನು. ಆಶ್ಚರ್ಯದಿಂದ ನೋಡುತ್ತಿದ್ದ ಚೆನ್ನನ ಕೈಗೆ ಅವುಗಳನ್ನೆಲ್ಲಾ ಕೊಟ್ಟು, "ಚೆನ್ನಾ, ಇವುಗಳನ್ನೆಲ್ಲಾ ತೆಗೆದುಕೊಂಡು ಕುದುರೆಯೊಂದಿಗೆ ಹಿಂದಿರುಗಿ ಹೋಗು. ತಂದೆಯವರಿಗೆ ನನ್ನ ಪ್ರಣಾಮಗಳನ್ನು ಹೇಳು. ಸಿದ್ಧಾರ್ಥನು ವಿಶಾಲ ಪ್ರಪಂಚದೊಳಗೆ ಪ್ರವೇಶಿಸಿದ್ದಾನೆ. ಸಕಲ ಜೀವಿಗಳ ಜನರ ಬಾಧೆಗಳನ್ನು ತೊಲಗಿಸುವಂತಹ ಧರ್ಮಚಕ್ರ ಸಂಚಾಲಕನಾದ ಚಕ್ರವರ್ತಿಯಾಗಿ ಕಪಿಲವಸ್ತು ನಗರಕ್ಕೆ ಬರುತ್ತಾನೆಂದು ಹೇಳು. ನಿಮ್ಮ ಕುಮಾರನ ಸಿದ್ಧಾರ್ಥನೆಂಬ ನಾಮಧೇಯವು ಸಾರ್ಥಕವಾಗುವಂತೆ ಆಶಯಗಳು ಬೇಗನೇ ಸಿದ್ಧಿಸುವಂತೆ ಆಶಿಸುತ್ತೇನೆಂತಲೂ ಹೇಳು" ಎಂದನು

ಚೆನ್ನನು ಏನೂ ತೋರದೆ ಬಾಯಿಬಿದ್ದು ಹೋದವನಾಗಿ ಕಣ್ಣೀರು ಸುರಿಸುತ್ತಾ ನಿಂತಿರುವುದನ್ನು ನೋಡಿ ಸಿದ್ಧಾರ್ಥನು, "ಚೆನ್ನಾ, ತಾಯಿ ಇಲ್ಲದ ನನ್ನನ್ನು ಚಿಕ್ಕಂದಿನಿಂದಲೂ ಎತ್ತಿ ತಿರುಗಿಸಿ ಆಡಿಸಿ ತಲೆಯ ಮೇಲೆ ಹೊತ್ತು, ನಾನೇನು ಕೇಳಿದರೂ ಹೇಳಿದರೂ ನೀಡುತ್ತ ಮಾಡುತ್ತ ತಾಯಿಯ ಅನಂತರ ನೀನೇ ತಾಯಿಯಾಗಿ ಪೋಷಿಸಿದವನು. ನಿನ್ನ ವಾತ್ಸಲ್ಯದ ಋಣವು ಎಂದಿಗೂ ತೀರುವಂತಹುದಲ್ಲ. ಮನುಷ್ಯನಾಗಿ ಹುಟ್ಟಿದುದರ ಸಾರ್ಥಕತೆಗಾಗಿ ಹಂಬಲಿಸಿಕೊಂಡಿರುವ ನನ್ನನ್ನು ಈ ರಾತ್ರಿಯ ಹೊತ್ತಿನಲ್ಲಿ ನಗರವನ್ನು ದಾಟಿಸಿರುತ್ತೀ. ನಿನ್ನ ಉಪಕಾರವನ್ನು ಎಂದಿಗೂ ಮರೆಯಲಾರೆ. ನನ್ನ ಉದ್ದೇಶವು ಈಡೇರಿಬಿಟ್ಟರೆ ವಿಶ್ವಶಾಂತಿಗೆ ಕಾರಣನಾದ ಮೊತ್ತಮೊದಲನೆಯವನು ನೀನೇ ಆಗುವಿ. ಹೋಗಪ್ಪಾ, ಹೋಗು!" ಎಂದು ಚೆನ್ನನ ಭುಜವನ್ನು ತಟ್ಟಿದನು. ಬಾಷ್ಪಪೂರಿತ ಕಣ್ಣುಗಳಿಂದ ಚೆನ್ನನು ಕದಲಲೊಲ್ಲದ ಕಾಲುಗಳನ್ನು ಎತ್ತಿ



ಎತ್ತಿ ಕದಲಿಸುತ್ತ, ಕುದುರೆಯೊದಿಗೆ ಸಿದ್ಧಾರ್ಥನು ವಿಸರ್ಜಿಸಿ ಕೊಟ್ಟ ವಸ್ತುಗಳನ್ನೆಲ್ಲಾ ತೆಗೆದುಕೊಂಡು ನಗರಾಭಿಮುಖವಾಗಿ ಅಡಿದೆಗೆದನು.

ಸಿದ್ಧಾರ್ಥನು ತನ್ನ ಪ್ರಯಾಣವನ್ನು ಮುಂದು ವರಿಸಿ ನಡೆಯತೊಡಗಿದನು. ಶುಕ್ರೋದಯ ವಾಯಿತು, ಉಷಃಕಾಲವು ಪ್ರವೇಶಿಸಿತು. ಅದನ್ನನು ಸರಿಸಿ ಸೂರ್ಯೋದಯವೂ ಆಯಿತು.

ಅತ್ತ ಅರಮನೆಯಲ್ಲಿ ಚೆನ್ನನು ಬಿಕ್ಕುತ್ತ ಕಣ್ಣೀರು ಸುರಿಸುತ್ತ ಹೇಳಿದ ಮಾತುಗಳನ್ನೆಲ್ಲಾ ಕೇಳಿ, ಶುದ್ಧೋದನ ಮಹಾರಾಜನು ತೀರಾ ಹತಾಶನಾಗಿ ಮೂರ್ಛೆಹೋಗಿ ಬಿದ್ದನು.

ಯಶೋಧರೆ ಹಸುಕಂದ ರಾಹುಲನನ್ನು ಅಪ್ಪಿ ಕೊಳ್ಳುತ್ತ, "ಕಂದಾ, ನೀನು ಕೂಡಾ ನಿನ್ನ ಅಪ್ಪ ನನ್ನು ನಿಲ್ಲಿಸಲಾರದೆ ಹೋದೆಯಲ್ಲೋ!" ಎಂದು ಧಾರೆಧಾರೆಯಾಗಿ ಕಣ್ಣೀರು ಸುರಿಸಿ ಶೋಕಿಸಿದಳು. ಆಮೇಲೆ ಎದೆಯನ್ನು ದೃಢಪಡಿಸಿಕೊಂಡು, ತನ್ನ ಪತಿದೇವನ ಮುಖದಲ್ಲಿರುವ ಮಹಾ ಪುರುಷ ಲಕ್ಷಣಗಳನ್ನು ನೆನೆದುಕೊಳ್ಳುತ್ತ, ಗಂಭೀರಳಾಗಿ ಎದ್ದು ಹೋಗಿ ಮೂರ್ಛೆಬಿದ್ದ ಮಾವಯ್ಯನಿಗೆ ಪರಿ ಚರ್ಯೆಗಳನ್ನು ಮಾಡಿ, ಮೂರ್ಛೆಯಿಂದ ಎಚ್ಚರ ಗೊಳಿಸಿದಳು.

"ಮಹಾರಾಜರಾಗಿರುವ ಮಾವಯ್ಯಾ! ನಿಮ್ಮ ಕುಮಾರನು ಸಾಧಾರಣ ಮಾನವನೆಂಬ ಆಲೋಚನೆ ಬಿಟ್ಟು, ಶಾಕ್ಯವಂಶವನ್ನು ಪುನೀತ ಮಾಡಲು ಜನಿಸಿದ ಅವತಾರ ಪುರುಷನೆಂದು ತಿಳಿಯಬೇಕು. ನೀವು ಕಪಿಲವಸ್ತು ರಾಜ್ಯದ ಪೌರರ ಪ್ರಜೆಗಳ ಕ್ಷೇಮ ಶ್ರೇಯಸ್ಸುಗಳನ್ನು ಹೇಗೆ ಕೋರಿಕೊಳ್ಳು ವಿರೋ, ಹಾಗೆಯೇ ಈ ವಿಶಾಲ ಜಗತ್ತಿನ ಜನ ರೆಲ್ಲರೂ ನಿಮ್ಮ ಕುಮಾರನ ಪ್ರಜೆಗಳೇ ಆದರು! ಅವರಿಗಾಗಿಯೇ ಗೌತಮ ಸಿದ್ಧಾರ್ಥನು ಜನಿಸಿದ್ದಾನೆ. ಅವರಿಗಾಗಿಯೇ ಹೊರಟು ಹೋಗಿದ್ದಾನೆ!" ಎಂದು ಸಿದ್ಧಾರ್ಥನಿಗೆ ತಕ್ಕ ಪತ್ನಿಯಂತೆ ಹೇಳಿದಳು.

ಶುದ್ಧೋದನನು ಅವಳ ಮಾತುಗಳನ್ನು ಕೇಳಿ ಪರವಶನಾಗಿ ದುಃಖವನ್ನು ತಡೆದುಕೊಳ್ಳಲು ಶಕ್ತ ನಾದನು. ಯಶೋಧರೆ ರಾಹುಲನನ್ನು ತಾತನಿಗೆ ಒಪ್ಪಿಸುತ್ತ, "ತಗೊಳ್ಳಿ ಮಾವಯ್ಯಾ, ಆತನ ಪ್ರತಿ ಬಿಂಬ" ಎಂಧಳು.

ಶುದ್ಧೋದನನು ಮೊಮ್ಮಗನನ್ನು ನೋಡುತ್ತ ಕುಮಾರನನ್ನು ನೆನೆದುಕೊಂಡನು. ಇದೇ ಹಸುಕಂದ ಸಿದ್ಧಾರ್ಥನನ್ನಲ್ಲವೇ ಮಾಯಾದೇವಿ ತನ್ನ ಕೈಗೆ ಕೊಟ್ಟು ಮಾಯವಾಗಿ ಹೋದಳು!

"ಸಿದ್ಧಾರ್ಥನು ಹೇಳಿದಂತೆ ಬೇಗದಲ್ಲೇ ಕಪಿಲ ವಸ್ತುವಿಗೆ ಬರುತ್ತಾನೆ, ಬಾರದೆಹೋಗನು. ಹೇಳಿದ ಮಾತು ಎಂದಿಗೂ ತಪ್ಪುವವನಲ್ಲ. ಬರಲೇಬೇಕು, ಬಂದೇ ಬರುತ್ತಾನೆ" ಎಂಬ ಆಶೆಯಿಂದಲೇ ರಾಜ್ಯ ಪಾಲನೆ ಮಾಡತೊಡಗಿದನು ಶುದ್ಧೋದನ ಮಹಾ ರಾಜ. ಯಶೋಧರೆ ರಾಹುಲನನ್ನು ಆ ತಂದೆಗೆ ತಕ್ಕ

ಮಗನೆನಿಸುವಂತೆ ಆಗಬೇಕೆಂದು ಬಯಸುತ್ತ, ಚಿಕ್ಕಂದಿನಿಂದಲೇ ಅವನಿಗೆ ಒಳ್ಳೆಯ ಶಿಕ್ಷಣ ಕೊಡಿಸಿ ತಿದ್ದಿ ತೀಡಿ ಬೆಳೆಸುತ್ತಿದ್ದಳು.



ಜೀವಜಗತ್ತನ್ನು ಉದ್ಧರಿಸಬಲ್ಲಂತಹ ಸತ್ಯಾನ್ವೇಷಣೆಯಲ್ಲಿ ಸಿದ್ಧಾರ್ಥನು ಅನೇಕ ಕಷ್ಟಗಳಿಗೆ ಈಡುಗೊಟ್ಟು ಎದೆಗೊಟ್ಟು ಇದಿರಿಸುತ್ತ, ಶಮದಮಾದಿಗಳನ್ನು ಸಹಿಸಿ ಪಳಗುತ್ತ, ಅನೇಕ ಪ್ರಾಂತಗಳಲ್ಲಿ ತಿರುಗಾಡಿದನು. ಹಸಿವೆ ಬಾಯಾರಿಕೆಗಳಿಂದ ಬಸವಳಿದು ಎಚ್ಚರತಪ್ಪಿ ಒಂದೆಡೆಯಲ್ಲಿ ಬಿದ್ದನು.

ಆಗ ಒಬ್ಬ ಗೋಪಾಲಕನು ಅವನಿಗೆ ಶುಶ್ರೂಷೆ ಮಾಡಿ, ಹಾಲುಕೊಟ್ಟು ಕಾಪಾಡಿದನು. ಆಗಲೇ ಸಿದ್ಧಾರ್ಥನಿಗೆ ಪ್ರಾಣರಕ್ಷಣೆ ಎಷ್ಟು ದೊಡ್ಡದೆಂಬುದು ತಿಳಿಯಿತು. ಪರರಿಗೆ ಸೇವೆ ಮಾಡುವುದೂ ಮಾನವ ಧರ್ಮವೆಂಬುದನ್ನು ಮನಗಂಡನು.

ಸಿದ್ಧಾರ್ಥನು ಭಿಕ್ಷುವಾಗಿ ದೇಶಸಂಚಾರ ಮಾಡುತ್ತ, ಸನ್ಯಾಸಿಗಳನ್ನೂ, ಭಿನ್ನ ಭಿನ್ನ ಮಾರ್ಗಗಳನ್ನು ಅನುಸರಿಸುವ ಎಷ್ಟೋ ಮಂದಿಯನ್ನೂ ಕಲೆತುಕೊಂಡು ಅವರಿಂದ ಎಷ್ಟೋ ವಿಷಯಗಳನ್ನು ತಿಳಿದುಕೊಂಡನು. ತಪಸ್ಸು ಮಾಡಿದರೆ ಎಲ್ಲವೂ ಸಿದ್ಧಿಸುವುದೆಂದು ಅವರೆಲ್ಲರ ಒಟ್ಟು ಅಭಿಪ್ರಾಯದ ಸಾರವಾಗಿತ್ತು.

ಅದರಂತೆ ಸಿದ್ಧಾರ್ಥನು ತಪಸ್ಸಿಗೂ ಪ್ರಾರಂಭಿಸಿದನು. ಅವನು ಕಠೋರ ದೀಕ್ಷೆಯಲ್ಲಿ ತಪಸ್ಸು ಮಾಡಿಕೊಂಡಿರುವಾಗ, ಸುಜಾತೆ ಎಂಬ ತುಂಬಿದ ಬಸುರಿಯಾದ ಗೋಪಕಾಂತೆಯೊಬ್ಬಳು ತನಗೆ ಕುಮಾರನು ಹುಟ್ಟಿದರೆ, ತಾನು ಮತ್ತೆ ಬಂದು ಈ ತಪಸ್ವಿಯ ದರ್ಶನ ಮಾಡುತ್ತೇನೆಂದು ಹರಕೆ ಹೇಳಿಕೊಂಡಳು. ಅದರಂತೆ ಅವಳಿಗೆ ಕುಮಾರನೇ ಜನಿಸಿದನು. ಅವಳು ಹರಕೆ ಸಲ್ಲಿಸಲಿಕ್ಕಾಗಿ ಪಾಯಸವನ್ನೂ, ಹಣ್ಣುಗಳನ್ನೂ ತೆಗೆದುಕೊಂಡು, ಹಸುಮಗುವಿನೊಂದಿಗೆ ಸಿದ್ಧಾರ್ಥನ ಬಳಿಗೆ ಬಂದು, ಅವನ ಪಾದಪ್ರದೇಶದಲ್ಲಿ ಅವುಗಳನ್ನೆಲ್ಲ ಅಣಿಗೊಳಿಸಿಟ್ಟು ನಮಸ್ಕಾರವನ್ನು ಮಾಡಿದಳು.

ಆಗ ಸಿದ್ಧಾರ್ಥನು ತುಂಬಾ ಸೊರಗಿ ಎಲುವು ಗೂಡಿನಂತಾಗಿ ದೇಹಶಕ್ತಿ ಪೂರಾ ಕಳೆದುಕೊಂಡಿದ್ದನು. ಹಸಿವೆಯ ಕಾಟ ವಿಪರೀತವಾಗಿದ್ದುದರಿಂದ ಅವಳು ತಂದ ಪಾಯಸವನ್ನೂ, ಹಣ್ಣುಗಳನ್ನೂ ಸ್ವೀಕರಿಸಿ, ಪ್ರಾಣ ಉಳಿಸಿಕೊಂಡನು.

ಆಮೇಲೆ ಸುಜಾತೆ ಅವನಿಗೆ ಕೈಮುಗಿದು ತನ್ನ ಹರಕೆಯ ಸಂಗತಿಯನ್ನು ಹೇಳಿ, "ಸ್ವಾಮಿ, ತಮ್ಮ ದಯದಿಂದ ನನಗೆ ಕುಮಾರನೇ ಹುಟ್ಟಿದನು!" ಎನ್ನುತ್ತ ಸಿದ್ಧಾರ್ಥನು ಬೇಡವೆಂದರೂ ಕೇಳದೆ ಮಗನನ್ನು ಅವನ ಪಾದಗಳಿಗೆ ತಾಗಿಸಿದಳು.

ಆಗ ಸಿದ್ಧಾರ್ಥನು "ಅಮ್ಮಾ, ನೀನು ಭಾವಿಸಿದ ಹಾಗೆ ನಾನು ಮಹಿಮಾನ್ವಿತನೇನೂ ಅಲ್ಲ. ನೀನು ಯಾವ ಭಾವನೆಯಿಂದ ನನಗೆ ಆಹಾರ ತಂದು ಕೊಟ್ಟರೂ ನಾನು ನಿನ್ನನ್ನು ದಯಾಸ್ವರೂಪಿಣಿ



ಯೆಂತಲೇ ತಿಳಿಯುತ್ತೇನೆ, ನೀನು ನನಗೆ ಪ್ರಾಣ ಭಿಕ್ಷೆ ನೀಡಿದ ಹಾಗೆಯೇ ಆಗಿದೆ. ನಿನ್ನಿಂದ ಭೂತ ದಯೆ ಎಂದರೇನೆಂಬುದನ್ನು ನಾನು ತಿಳಿದುಕೊಂಡೆನು. ನಿನ್ನ ಹಾಗೆಯೇ ಪ್ರಕೃತಿ ಸಕಲ ಜೀವ ರಾಶಿಗಳನ್ನೂ ತಣ್ಣಗಿನ ದಯಾದೃಷ್ಟಿಯಿಂದ ನೋಡುತ್ತ ಕಾಪಾಡಿಕೊಂಡಿದೆ, ನೀನು ಆ ಪ್ರಕೃತಿಗೆ ಸಮಾನಳಾದ ತಾಯಿ !" ಎಂದನು.

"ಸ್ವಾಮಿ, ನಿಮ್ಮ ದೊಡ್ಡತನವನ್ನು ಹೇಳಿಕೊಳ್ಳಲು ಇಷ್ಟವಿಲ್ಲದೆ, ಹೀಗೆ ಹೇಳುವಿರೇ ಹೊರತು, ನಿಜವಾಗಿಯೂ ನೀವು ಮಹಾ ಮಹಿಮಾನ್ವಿತರೇ ಹೌದು, ನನಗೆ ಗೊತ್ತಿದೆ. ನನ್ನದು ಗೋಪಕುಲ ಸ್ವಾಮಿ. ದೊಡ್ಡವರಾದ ನೀವು ನನ್ನ ಮನೆಗೆ ಬಂದು, ನಮ್ಮೆಲ್ಲರ ಆತಿಥ್ಯವನ್ನು ಸ್ವೀಕರಿಸಿ ಮಗುವನ್ನು ಆಶೀರ್ವದಿಸಬೇಕೆಂದು ನನಗೆ ಆಸೆ. ಆದರೆ ನಿಮ್ಮನ್ನು ಕರೆಯಲು ನಾನೆಷ್ಟರವಳು ! ತೀರಾ ಅಲ್ಪಳಾಗಿದ್ದೇನೆ !" ಎಂದಳು ಸುಜಾತೆ.

"ಅಮ್ಮಾ, ನಾನು ಸತ್ಯವನ್ನೇ ಹೇಳುತ್ತೇನೆ. ನಿನ್ನನ್ನು ಅಲ್ಪಳೆಂದು ತಿಳಿಯಬೇಡ. ನಾನೂ ನಿನ್ನಂಥವನೇ. ಈಗ ನನ್ನ ತಪಸ್ಸು ಫಲಿಸಲಿಲ್ಲ. ನಿನಗೂ ನನಗೂ ಇದೇ ವ್ಯತ್ಯಾಸ. ಮಾನವರೊಳಗೆ ಹೆಚ್ಚು ಕಡಿಮೆ ಎಂಬ ಭೇದಗಳನ್ನಿಟ್ಟುಕೊಳ್ಳುವುದು ಒಳ್ಳೆಯದಲ್ಲ. ಒಬ್ಬರು ಹೆಚ್ಚು ಒಬ್ಬರು ಕಡಿಮೆ ಎಂದುಕೊಳ್ಳಬೇಕಾದ ಅಗತ್ಯವೇ ಇಲ್ಲಮ್ಮಾ. ಜೀವಿಗಳೊಳಗೆಲ್ಲಾ ಪ್ರಾಣವು ಒಂದೇ ಬಗೆಯಾಗಿರುವ ಹಾಗೆಯೇ ಮಾನವತ್ವವೂ ಸಹ ಒಂದೇ ಬಗೆ. ನಾನು ಕೃತಾರ್ಥನಾಗಿ ನಿನ್ನ ಕುಮಾರನನ್ನು ಆಶೀರ್ವದಿಸತಕ್ಕ ಅರ್ಹತೆ ಪಡೆದ ಮೇಲೆ, ತಪ್ಪದೆ ನಿನ್ನ ಮನೆಗೆ ಅತಿಥಿಯಾಗಿ ಬರುತ್ತೇನೆ" ಎಂದನು ಸಿದ್ಧಾರ್ಥ.

"ತಪ್ಪದೆ ಬರಬೇಕು ಸ್ವಾಮಿ !" ಎಂದು ಹೇಳಿ ಸುಜಾತೆ ಮಗುವನ್ನು ಮತ್ತೊಮ್ಮೆ ಅವನ ಪಾದಗಳಿಗೆ ತಾಗಿಸಿ, ನಮಸ್ಕಾರಮಾಡಿ ಅಪ್ಪಣೆ ಪಡೆದು ಹೊರಟುಹೋದಳು.

ಮುಂದೆ ಕೆಲವು ದಿನಗಳಲ್ಲಿ ಸಿದ್ಧಾರ್ಥನಿಗೆ ತಪಸ್ಸಿನಲ್ಲಿಯೂ ಕಠೋರ ದೀಕ್ಷೆಯಲ್ಲಿಯೂ ಇರುವ ನಂಬುಗೆ ಹೋಯಿತು. ತಪಸ್ಸು ಮಾಡುವವರೆಲ್ಲರಲ್ಲಿಯೂ ಸ್ವಂತ ಪ್ರಯೋಜನವೂ ಸ್ವಾರ್ಥವೂ ಕಾಣುತ್ತಿತ್ತೇ ಹೊರತು, ಜೀವಕೋಟಿಗಳ ಮೇಲೆ ಪ್ರೇಮವಾಗಲೀ ಸಹಕಾರ ಮಾಡುವ ಗುಣವಾಗಲೀ ಕಂಡು ಬರಲಿಲ್ಲ. ಅವು ಶರೀರವನ್ನು ಹಿಂಸೆಪಡಿಸುವ ಆತ್ಮಹತ್ಯಕ್ಕೆ ಸಮಾನವಾಗಿಯೇ ತೋರಿದುವು. ಆದುದರಿಂದ ಗೌತಮ ಸಿದ್ಧಾರ್ಥನಿಗೆ ತಪಸ್ಸಿನಿಂದೇನೂ ಉಪಯೋಗವಿಲ್ಲವೆನಿಸಿತು.

ಹೀಗೆ ತಪಸ್ಸಿನ ಮೇಲೆ ಅವನಿಗೆ ಬಂದ ವಿಮುಖತೆಯನ್ನು ನೋಡಿ, ಅವನ ಸಮೀಪದಲ್ಲಿ ತಪಸ್ಸು ಮಾಡಿಕೊಂಡಿದ್ದವರು, ಗೌತಮನು ತಪೋಭ್ರಷ್ಟನಾದನೆಂದು ತಮ್ಮೊಳಗೆ ಗೇಲಿ ಮಾಡಿದರು. ಕೆಲಮಂದಿ ತಪಃಶಾಲಿಗಳೂ, ಸಾಧಕರೂ ಅದ್ಭುತ



ಶಕ್ತಿಗಳನ್ನೂ, ಮಹಿಮೆಗಳನ್ನೂ ಸಂಪಾದಿಸಿ ಇಂದ್ರ ಜಾಲ ವಿದ್ಯೆಗೆ ಸಮಾನವಾಗಿ, ಅವುಗಳಿಂದ ಇತರ ರನ್ನು ಆಕರ್ಷಿಸಿ ತಮ್ಮ ಸುತ್ತಲೂ ಸೇರಿಸಿಕೊಳ್ಳುತ್ತ ಅದು ದೊಡ್ಡ ಘನ ಕಾರ್ಯವೆಂದು ಉಬ್ಬಿಕೊಳ್ಳು ತ್ತಾರೆಯೇ ಹೊರತು, ವಿಶ್ವಮಾನವ ಶ್ರೇಯಸ್ಸಿಗೆ ಅವುಗಳಿಂದ ಎಷ್ಟು ಮಾತ್ರವೂ ಪ್ರಯೋಜನವಾಗು ವುದಿಲ್ಲ. ಪ್ರಕೃತಿ ಧರ್ಮವನ್ನು ಮಾರ್ಪಡಿಸಲು ಅವುಗಳಿಂದಾಗದೇ ಆಗದು. ಮಹಾ ಮಹಿಮ ರೆಲ್ಲರೂ ಕಾಲಧರ್ಮ ಹೊಂದಿಕೊಂಡೇ ಇದ್ದಾರೆ.

ಅಜ್ಞಾನದಿಂದ, ಮೂಢ ನಂಬಿಗೆಗಳಿಂದ ನರಳಾಡಿ ಕೊಂಡಿರುವ ಜನರು ಹೇಗೆತಾನೇ ಮಾರ್ಪಡು ತ್ತಾರೆ ? ಯಜ್ಞಯಾಗಗಳ ಹೆಸರಿನಲ್ಲಿ ಮಾರಣ ಹೋಮಗಳು ಮಿತಿಮೀರಿ ಹೋಗುತ್ತಲೇ ಇವೆ.

ಈ ಯಜ್ಞಯಾಗಗಳು ರಾಜರುಗಳನ್ನು ಉದ್ರೇಕಿಸಿ ವಿಪರೀತ ಮಾಂಸಭಕ್ಷಕರಾಗುವಂತೆ ಮಾಡುತ್ತವೆ. ಈ ಬಗೆಯ ಅಗ್ರಶ್ರೇಣಿಯವರು ಜನಸಮುದಾಯವನ್ನು ಇನ್ನಷ್ಟು ತಳಕ್ಕಿಳಿಯುವಂತೆ ತುಳಿಯುತ್ತಿದ್ದಾರೆ.

ಇಂತಹ ಆಲೋಚನೆಗಳಿಂದ ಆಂದೋಳಿತ ನಾದ ಸಿದ್ಧಾರ್ಥನು, ತರ್ಕವಿತರ್ಕಗಳ ಗೊಡವೆ ಯಿಲ್ಲದ, ಕರ್ತವ್ಯ ಧರ್ಮವನ್ನು ಕುರಿತು ಚಿಂತಿಸುತ್ತ, ಆ ಗಯಾಕ್ಷೇತ್ರದಲ್ಲಿದ್ದ ಒಂದು ದೊಡ್ಡ ಅರಳಿ ಮರದ ಕೆಳಗೆ ಕುಳಿತುಕೊಂಡು ಅಂತರ್ಮುಖನಾಗಿ ದ್ದಾಗ. ಅವನಿಗೆ ಜ್ಞಾನೋದಯವಾಯಿತು.

ಆ ದಿನ ಪೂರ್ಣಿಮಾ. ಚಂದ್ರಬಿಂಬವು ಪರಿ ಪೂರ್ಣವಾಗಿ ಪ್ರಕಾಶಿಸುವ ಹಾಗೆಯೇ ಗೌತಮನಿಗೆ ಬುದ್ಧತ್ವವು ಸಿದ್ಧಿಸಿತು. ಅವನು ಪರಿಪೂರ್ಣ ಬುದ್ಧ ಮೂರ್ತಿಯಾಗಿ ವಿಕಸಿತನಾದನು. ತಾನು ಕೃತಾರ್ಥ ನಾದೆನೆಂಬ ದೊಡ್ಡ ಸಂತೃಪ್ತಿ ಅವನಿಗಾಯಿತು.

ವೈಶಾಖ ಮಾಸದ ಪೂರ್ಣಿಮಾ ದಿನವು "ಬುದ್ಧ ಪೂರ್ಣಿಮೆ" ಎಂದು ಹೆಸರು ಪಡೆಯಿತು. ಅಶ್ವತ್ಥ ವೃಕ್ಷವು ಬೋಧಿವೃಕ್ಷವೆಂದು ಪೂಜಿಸಲ್ಪಟ್ಟಿತು. ಬುದ್ಧನು ಬೋಧಿಸತ್ವನೆಂದು ಹೆಸರು ಪಡೆದನು.

ಪ್ರಾಣಿಕೋಟಿಗಳಲ್ಲಿ ಮನುಷ್ಯನು ಬುದ್ಧಿ ವಿಶೇಷತೆ ಯಿಂದಲೇ ಉನ್ನತನೆನಿಸಿಕೊಂಡಿದ್ದಾನೆ. ಬುದ್ಧಿ ಯನ್ನು ವಿಕಸನಗೊಳಿಸಿಕೊಳ್ಳುವುದರ ಮೂಲಕ ವಾಗಿ ತನ್ನನ್ನು ತಾನೇ ಉದ್ಧರಿಸಿಕೊಳ್ಳಲು ಅವನಿಗೆ ಸಾಧ್ಯ. ಅಹಿಂಸೆಯಿಂದಲೇ ಮಾನವನು ನಿಜವಾದ ಮಾನವನಾಗಿ ಬುದ್ಧನಾಗುತ್ತಾನೆ. ಬಯಕೆಗಳನ್ನು ಬಂಧಿಸಿ, ಆಶೆಗಳ ಗೊಡವೆಗಳನ್ನು ಮೂಲೆಗೊತ್ತಿ, ರಾಗದ್ವೇಷಗಳನ್ನು ವರ್ಜಿಸಿ, ಸುಖದುಃಖಗಳನ್ನು ಸಮಾನತೆಯಿಂದ ನೋಡಿ, ಅತೀವವಾದ ನಿರ್ವಾಣ ವನ್ನು ಮುಟ್ಟಿ ಬುದ್ಧತ್ವ ಪಡೆದ ಮಾನವನು ಬುದ್ಧನಾಗಿ, ಒಂದು ಜ್ಯೋತಿಯಿಂದ ಅನೇಕ ಜ್ಯೋತಿ ಗಳನ್ನು ಬೆಳಗಿಸುವಂತೆ, ಅನೇಕರಲ್ಲಿ ಬುದ್ಧತ್ವವನ್ನು ಉಂಟುಮಾಡಿದರೆ, ಈ ಜಗತ್ತು ಕತ್ತಲೆಯಿಂದ ಬೆಳಕಿಗೆ ಬರುತ್ತದೆ. ಬುದ್ಧನೇ ಜಗತ್ತಿಗೆ ಜ್ಯೋತಿ.



ಗೌತಮ ಬುದ್ಧನು ತಾನು ತಿಳಿದುಕೊಂಡ ಸತ್ಯಗಳನ್ನು ಎಲ್ಲರಿಗೂ ಹೇಳತೊಡಗಿದನು. ಕೇಳ ಕೇಳುತ್ತ, ಮೊದಲು ಅವನನ್ನು ಎಗತಾಳಿ ಮಾಡಿದವರೆಲ್ಲಾ ಅವನ ಶಿಷ್ಯರಾಗಿ ಅನುಯಾಯಿಗಳಾಗಿ ಸೇರಿಕೊಂಡರು.

ಬುದ್ಧನು ಪ್ರಬೋಧನೆ - ಮಾಡದ ಧರ್ಮವು ಪ್ರಪಂಚದಲ್ಲಿಲ್ಲ. ಸಾಮಾನ್ಯ ಜನರಿಗೆ ಕೂಡಾ ಅರ್ಥವಾಗುವ ಹಾಗೆ ಎಲ್ಲರಿಗೂ ಆಚರಿಸಲು ಸೂತ್ರಗಳನ್ನು ಬುದ್ಧನು ಪ್ರಚಾರ ಮಾಡಿದನು.

ಬುದ್ಧನ ಬೋಧನೆಯೊಳಗಿರುವ ಸತ್ಯವನ್ನು ಗುರುತಿಸಿ ಬಹು ಬೇಗದಲ್ಲೇ ಸಾವಿರಾರು ಜನರು ಬುದ್ಧನ ಶಿಷ್ಯರಾದರು. ಅವನು ಹೇಳಿದ ದಾರಿಯನ್ನೇ ಹಿಡಿದರು. ಅಹಿಂಸೆಯನ್ನು ಪರಮ ಧರ್ಮವಾಗಿ ಬೋಧಿಸುತ್ತ ಬುದ್ಧನು ದೇಶಸಂಚಾರ ಮಾಡಿಕೊಂಡಿರುವಾಗ, ಮಗಧ ದೇಶದ ಚಕ್ರವರ್ತಿ ಬಿಂಬಿಸಾರನು, ಬುದ್ಧನ ಉದ್ಬೋಧನೆಗಳಿಂದ ಉತ್ತೇಜಿತನಾಗಿ, ಸಾವಿರಾರು ಜೀವಿಗಳು ಬಲಿಯಾಗಲಿದ್ದ, ತನ್ನ ಯಜ್ಞಕಾರ್ಯಗಳನ್ನು ಪೂರ್ತಿ ನಿಲ್ಲಿಸಿದನು. ತನ್ನ ಕಿರೀಟವನ್ನು ಬುದ್ಧನ ಪಾದಗಳ ಮುಂದೆ ಇಟ್ಟು, ತನ್ನ ಪ್ರಜೆಗಳೆಲ್ಲರಿಗೂ ಬುದ್ಧ ಧರ್ಮವು ಶಿರೋಧಾರ್ಯವಾಗುವಂತೆ ಮಾಡಿದನು.

ಬುದ್ಧನ ಬೋಧನೆಗಳು, ಸಿದ್ಧಾಂತಗಳು, ಸೂತ್ರಗಳು ಮೊದಲಾದುವೆಲ್ಲಾ ಬೌದ್ಧಧರ್ಮವಾಗಿ ನೆಲೆನಿಂತಿತು. ಬೌದ್ಧ ಧರ್ಮಾವಲಂಬಿಗಳೆಲ್ಲರೂ ಬೌದ್ಧರೆಂದು ಹೆಸರು ಪಡೆದರು. ಬೌದ್ಧ ಧರ್ಮವು ಹರಡಿಕೊಂಡು ಹೋಯಿತು.

ಅಜ್ಞಾನಾಂಧಕಾರದಲ್ಲಿ ಮುಳುಗಿರುವ ಜಗತ್ತಿಗೆ ದಾರಿ ತೋರಿಸುವ ಜ್ಯೋತಿಯಾಗಿ ಬುದ್ಧನು ನಿಂತನು. ಅಹಿಂಸಾಜ್ಯೋತಿಯಾದನು. ಧರ್ಮಚಕ್ರವೇ ಅವನ ದಿವ್ಯಾಯುಧವಾಗಿ ಅದರ ಚಾಲನೆಯಿಂದ ಧರ್ಮಚಕ್ರದ ಶಾಂತತೆಯ ಶಕ್ತಿ ಪ್ರಭಾವಗಳು ಲೋಕಕ್ಕೆ ತಿಳಿಯುತ್ತ, ಅವನು ಚಕ್ರವರ್ತಿಯಾದನು.

ಬುದ್ಧನು ದೇಶ ದೇಶಗಳನ್ನು ತಿರುಗಿ, ಅಲ್ಲಲ್ಲಿ ಬೌದ್ಧ ಸಂಘಗಳ ಏರ್ಪಾಡು ಮಾಡಿ, ಜನತೆಯಲ್ಲಿ ಸೇವಾ ಧರ್ಮವನ್ನು ನೆಲೆಗೊಳಿಸಿದನು. ಬೌದ್ಧ ಸನ್ಯಾಸಿಗಳೆಲ್ಲರೂ ಸಮಾಜ ಸೇವಕರಾಗಿ, ಜನಸಾಮಾನ್ಯರಿಗೆ ಒಳ್ಳೆಯ ಸಂಸ್ಕಾರಗಳನ್ನು ಕಲಿಸುತ್ತ ಬರತೊಡಗಿದರು.

ಬುದ್ಧನು ಸಂಚಾರ ಕಾರ್ಯಕ್ರಮಗಳನ್ನು ನಡೆಸಿಕೊಂಡಿದ್ದಾಗ ದೊಡ್ಡ ದೊಡ್ಡ ರಾಜರು ಅವನಿಗೆ ಕೊಡೆ ಹಿಡಿದರು. ಚಕ್ರವರ್ತಿಗಳು ತಮ್ಮ ಕಿರೀಟಗಳನ್ನು ಅವನ ಪಾದಗಳ ಮುಂದೆ ಇಟ್ಟರು. ಬುದ್ಧನನ್ನು ಚಕ್ರವರ್ತಿಗಳಿಗೆ ಚಕ್ರವರ್ತಿಯಾಗಿ ಕೀರ್ತಿಸುತ್ತ, ಬುದ್ಧನ ಆದೇಶಾನುಸಾರವಾಗಿ ಪ್ರಜೆಗಳನ್ನು ಪಾಲಿಸುತ್ತ, ಮುಖ್ಯವಾಗಿ ದಯೆಯೂ ಅಹಿಂಸೆಯೂ ಎಲ್ಲಾ ಪ್ರಜೆಗಳಲ್ಲಿಯೂ ಕೂಡಿ

ಹರಿಯುವಂತೆ ಮಾಡಿದರು. ಕುಲಪ್ರಭೇದಗಳಿಗೆ ತಾವಿಲ್ಲದ ಬೌದ್ಧ ಧರ್ಮವನ್ನು ಎಲ್ಲಾ ದೇಶಗಳ ಜನಬಾಹುಲ್ಯತೆಯೂ ಅವಲಂಬಿಸಿತು.

ಆಗ ಪಂಡಿತರು, ಪಾಮರರು, ಜ್ಞಾನಿಗಳು, ರಾಜರು, ಚಕ್ರವರ್ತಿಗಳು ಬುದ್ಧನನ್ನು ದೇವರೆಂದು ಭಾವಿಸಿದರು. ಅವನನ್ನು ಬುದ್ಧ ಭಗವಾನ್ ಎನ್ನುತ್ತಿದ್ದರು. ಆದರೆ ಬುದ್ಧನು ಯಾವ ವಿಧವಾದ ಆರಾಧನೆಯನ್ನೂ ಒಪ್ಪಿಕೊಳ್ಳಲಿಲ್ಲ. ಭಕ್ತಿ ಆರಾಧನೆ ಮುಖ್ಯವಲ್ಲವೆಂದೂ, ಸತ್ಕರ್ಮ ಸದ್ವರ್ತನೆಗಳಿಂದಲೇ ಮಾನವರು ನಿರ್ವಾಣ ಸ್ಥಿತಿಯನ್ನು ಹೊಂದುವರೆಂದೂ ಬುದ್ಧನು ಒತ್ತಿಯೊತ್ತಿ ಹೇಳುತ್ತಿದ್ದನು.

ಆರು ವರ್ಷಗಳ ತರುವಾಯ ಬುದ್ಧನು ಕಪಿಲವಸ್ತು ನಗರಕ್ಕೆ ಹೊರಟನು.

ಬುದ್ಧ ದೇವನು ಬರುವನೆಂಬ ವಾರ್ತೆ ಕಪಿಲವಸ್ತು ನಗರಕ್ಕೆ ಹೋಯಿತು. ಅದನ್ನು ಕೇಳಿ ಪ್ರಜೆಗಳು ಆನಂದೋತ್ಸಾಹಗಳಿಂದ ಉಕ್ಕಿದರು. ಸ್ವಾಗತ ಸನ್ನಾಹಗಳನ್ನು ಮಾಡತೊಡಗಿದರು. ಅವನಿಗೆ ನೀರಾಜನವೆತ್ತಲು ನಗರವಾಸಿಗಳೆಲ್ಲಾ ತವಕಿಸಿಕೊಂಡಿದ್ದರು.

ರಾಜಾ ಶುದ್ಧೋದನನು ತನ್ನ ಮಗ ಸಿದ್ಧಾರ್ಥ ಕುಮಾರನೇ ಬರುವನೆಂದು ತಿಳಿದು ಆನಂದಡೋಲಿಕೆಯಲ್ಲಿ ಓಲಾಡಿಕೊಂಡಿದ್ದನು.

"ಅಮ್ಮಾ, ನನ್ನ ಅಪ್ಪನವರು ಬರುತ್ತಿದ್ದಾರಂತೆ!" ಎಂದು ಕುಮಾರ ರಾಹುಲನು ಅತ್ಯಾನಂದದಿಂದ ಯಶೋಧರೆಯೊಂದಿಗೆ ಹೇಳಿದನು.

ಆಗ ಆರು ವರ್ಷದ ತನ್ನ ಮಗನನ್ನು ನೋಡಿ ಯಶೋಧರೆ "ಹೌದು ಕಂದಾ! ನಿನ್ನ ತಂದೆ ಈಗ ಭಿಕ್ಷುವಾಗಿ ಬರುತ್ತಿದ್ದಾರೆ. ಆ ಪ್ರಪಂಚ ಚಕ್ರವರ್ತಿಗೆ ನಾವು ಭಿಕ್ಷೆ ಹಾಕಬೇಕು" ಎಂದಳು.

"ಏನಂದಿ ಅಮ್ಮಾ? ಅವರು ಚಕ್ರವರ್ತಿಯೇ?" ಎಂದನು ಕುಮಾರ ರಾಹುಲ.

"ಹೌದು. ವಿಶ್ವಕ್ಕೇ ಚಕ್ರವರ್ತಿಯಾಗಿದ್ದಾರೆ ನಿನ್ನ ಅಪ್ಪ" ಎಂದಳು ತಾಯಿ.

"ನಮ್ಮದೆಲ್ಲವೂ ಅವರದೇ ತಾನೇ ಅಮ್ಮಾ?" ಎಂದನು ರಾಹುಲ.

"ಇವಾವುದೂ ಈಗ ಅವರಿಗೆ ಅಗತ್ಯವಿಲ್ಲ ಕಂದಾ, ಅದಕ್ಕೇ ಎಲ್ಲವನ್ನೂ ಬಿಟ್ಟು ಹೋದರು. ಅವರು ಹೇಳಿದ ಹಾಗೆ ನಡೆದುಕೊಳ್ಳುವುದೇ ಅವರಿಗೆ ಬೇಕಾದ ಭಿಕ್ಷೆ" ಎಂದಳು ಯಶೋಧರೆ.

"ಹಾಗೆಯೇ ಮಾಡೋಣ ಅಮ್ಮಾ. ಅಪ್ಪ ಏನು ಹೇಳುವರೋ ಅದನ್ನೇ ನಾನು ಮಾಡುತ್ತೇನೆ. ಅಪ್ಪನ ಹಿಂದೆಯೇ ನಡೆಯುತ್ತೇನೆ" ಎಂದು ರಾಹುಲನು ಹೇಳಲು ಯಶೋಧರೆ ಆನಂದದಿಂದ ಮಗನನ್ನು ಗಾಢಾಲಿಂಗನ ಮಾಡಿಕೊಂಡಳು.





# ಕತ್ತಿ, ಹಾರ

ಅನೇಕ ವರ್ಷಗಳ ಹಿಂದೆ ಗಜಪುರವೆಂಬ ರಾಜ್ಯವನ್ನು ಗಜವರ್ಮನೆಂಬ ರಾಜನು ಪಾಲಿಸಿಕೊಂಡಿದ್ದನು. ಅವನ ಏಕೈಕ ಕುಮಾರಿ ಕಳಾವತಿ. ಅವಳಿಗೆ ಯುಕ್ತ ವಯಸ್ಸು ಬಂದಾಗ ಗಜವರ್ಮನು ಮಗಳಿಗೆ ಸ್ವಯಂವರವನ್ನು ನಿಶ್ಚಯಿಸಿ, ದೇಶದೊಳಗೆಲ್ಲಾ ಪ್ರಕಟಪಡಿಸಿದನು.

ಸ್ವಯಂವರಕ್ಕೆ ಅನೇಕ ದೇಶಗಳ ರಾಜಕುಮಾರರು ಬಂದು ಕೂಡಿದರು. ಗೆಳತಿಯರ ಹಿಂದೆ ರಾಜಕುಮಾರಿ ಕೈಯಲ್ಲಿ ವರಮಾಲೆ ಹಿಡಿದುಕೊಂಡು ಸ್ವಯಂವರ ಮಂಟಪದೊಳಗೆ ಬರತೊಡಗಿದಳು. ಇದನ್ನು ಸೂಚಿಸುವ ಬೆಡಿ ಶಬ್ದವು ಸಿಡಿಯಿತು.

ಆಗ ಇದ್ದಕ್ಕಿದ್ದ ಹಾಗೆ ಸಭಾ ಮಂಟಪದ ಮುಂದೆ ಕಟ್ಟಲ್ಪಟ್ಟಿದ್ದ ಪಟ್ಟದಾನೆ ಬೆಡಿ ಶಬ್ದದಿಂದ ಕೆರಳಿ ಘೀಂಕರಿಸಿ ಕಟ್ಟು ಕಡಿದುಕೊಂಡು ಮಂಟಪದೊಳಗೆ ನುಗ್ಗಿ ಓಡಿಬರತೊಡಗಿತು.

ಸಭೆಯೊಳಗೆ ಅಲ್ಲೋಲಕಲ್ಲೋಲವೆದ್ದಿತು. ಮಾವಟಿಗನು ಕಕ್ಕಾವಿಕ್ಕಿಯಾದನು. ಸ್ವಯಂವರಕ್ಕೆ ಬಂದ ರಾಜಕುಮಾರರೂ ಇತರರೂ ಆಚೀಚೆ ಓಡಿ, ಭೀತಿಯಿಂದ ಸಿಕ್ಕಿದ ಬಾಗಿಲಿನಿಂದ ಹೊರಗೆ ಪಾರಾದರು.

ಆಗ ಅಲ್ಲಿದ್ದ ಒಬ್ಬ ಯುವಕನು ರಾಜಕುಮಾರಿಯನ್ನು ಸಮೀಪಿಸುವ ಆನೆಯ ಮುಂದೆ ಸಿಂಹದಂತೆ ಹಾರಿ, ಮಿಂಚಿನ ವೇಗದಲ್ಲಿ ಅದರ ಕುಂಭಸ್ಥಳದ ಮೇಲೆ ಎಗರಿ, ಮುಷ್ಟಿಯಿಂದ ಅದರ ಕಿವಿಗಳ ಹತ್ತಿರ ಬಲವಾಗಿ ಗುದ್ದಿದನು. ಆನೆ ಶಾಂತವಾಗಿ ಮುಂಡುಗಾಲೂರಿ ಕುಸಿಯಿತು. ಅಕಸ್ಮಾತ್ತಾಗಿ ಎದ್ದ ಭಯವು ಅಷ್ಟೇ ಅಕಸ್ಮಾತ್ತಾಗಿ ಶಾಂತವಾಯಿತು.

ಆ ಯುವಕನ ಧೈರ್ಯವನ್ನು ನೋಡಿ ರಾಜನಿಗೆ ಬಹಳ ಸಂತೋಷವಾಯಿತು. ಅವನು ತನ್ನ ಪ್ರಧಾನ ಅಂತರಂಗಿಕ ಸಲಹಾದಾರ ಧೀರವರ್ಮನ ಮಗ ವೀರಸೇನನೆಂದು ತಿಳಿಯಿತು.

ರಾಜಕುಮಾರಿ ಕಳಾವತಿ ತನ್ನ ಕೊರಳಿನಲ್ಲಿದ್ದ ಮುತ್ತಿನ ಹಾರವನ್ನು ತೆಗೆದು, " ನಿನ್ನ ಪ್ರಾಣವನ್ನು ಪಣವಿಟ್ಟು ನನ್ನ ಪ್ರಾಣ ಉಳಿಸಿದಿ. ಇದನ್ನು ಬಹುಮಾನವಾಗಿ ತೆಗೆದುಕೋ " ಎಂದು ವೀರಸೇನನ ಮುಂದೆ ನೀಡಿದಳು.

" ನನಗೆ ಬಹುಮಾನವೇಕೆ ? ತಾತ್ಕಾಲಿಕ ಕರ್ತವ್ಯವನ್ನೇ ನೆರವೇರಿಸಿದೆ. ಇದು ಯಾರಾದರೂ ಮಾಡುವಂಥ ಕೆಲಸ, ಅಷ್ಟೇ. ಇದರಲ್ಲಿ ನನ್ನ

ಆರ್. ವಿ. ಸ್ವಾಮಿ

ಪ್ರತ್ಯೇಕವಾದ ಘನ ಕಾರ್ಯವೇನಿಲ್ಲ" ಎಂದು ವಿನಯದಿಂದ ಹೇಳಿ, ಹಾರವನ್ನು ತೆಗೆದುಕೊಳ್ಳದೆ ಹೋಗಿಬಿಟ್ಟನು ವೀರಸೇನ.

ಸ್ವಯಂವರವು ಅಪೂರ್ಣತೆಯಲ್ಲಿ ನಿಂತಿತ್ತು. ಮತ್ತೆ ಪ್ರಾರಂಭಿಸುವ ಕಾರ್ಯ ನಡೆದಿತ್ತು. ಆಗ ರಾಜಕುಮಾರಿ ಕಳಾವತಿ ಒಂದು ದೊಡ್ಡ ಬೆಳ್ಳಿ ತಾಂಬಾಣದಲ್ಲಿ ಎರಡು ಖಡ್ಗಗಳನ್ನಿಟ್ಟು ಕೊಂಡು ತಂದೆಯ ಹತ್ತಿರ ತೆಗೆದುಕೊಂಡು ಬಂದು, "ಅಪ್ಪಾ, ಈ ಎರಡು ಕತ್ತಿಗಳಲ್ಲಿ ನಿಮಗೆ ಇಷ್ಟ ವಾದುದನ್ನು ತೆಗೆದುಕೊಳ್ಳಿ," ಎಂದಳು.

ಆ ಎರಡು ಖಡ್ಗಗಳಲ್ಲಿ ಒಂದಕ್ಕೆ ವಜ್ರಖಚಿತ ವಾದ ಹಿಡಿ ಇದ್ದಿತು. ಅದರ ಒರೆಯೂ ಬಂಗಾರ ದಿಂದ ಮಾಡಲ್ಪಟ್ಟು ಹೊಳೆಯುತ್ತಿದ್ದಿತು. ಎರಡ ನೆಯದಕ್ಕೆ ಸಾಧಾರಣ ಹಿಡಿಯೂ, ಚರ್ಮದ ಒರೆಯೂ ಇದ್ದಿತು.

ರಾಜನು ಎರಡು ಕತ್ತಿಗಳನ್ನೂ ಪರೀಕ್ಷಿಸಿ ನೋಡಿ, ಚರ್ಮದ ಒರೆಯಲ್ಲಿದ್ದ ಕತ್ತಿಯನ್ನು ತೆಗೆದು ಝಳಪಿಸಿ ತೋರಿಸುತ್ತ, "ನನಗೆ ಇದೇ ಮೆಚ್ಚಿಕೆ ಯಾಗಿದೆ" ಎಂದನು.

"ಬಂಗಾರದ ಒರೆಯಲ್ಲಿರುವ ವಜ್ರಖಚಿತ ಹಿಡಿಯ ಕತ್ತಿ ನಿಮಗೇಕೆ ಹಿಡಿಸಲಿಲ್ಲ ಅಪ್ಪಾ ?" ಎಂದು ಕೇಳಿದಳು ಕಳಾವತಿ.

"ವೀರನಿಗೆ ಬೇಕಾದುದು ಕತ್ತಿಯ ಹರಿತವೂ ಬಳಸುಗಳೂ. ಅದರ ಒರೆಯೂ ಹಿಡಿಕೆಯೂ ಎಂತಹ ಬೆಲೆಯದೆಂಬುದಲ್ಲ, ಚರ್ಮದ ಒರೆಯಲ್ಲಿರು ವುದೇ ಸರಿಯಾದ ಕತ್ತಿ ! ಅದಕ್ಕೇ ಅದು ನನಗೆ ಹಿಡಿಸಿತು" ಎಂದನು ರಾಜ.

"ಹಾಗಾದರೆ ಮನುಷ್ಯರ ಅಂದ ಚೆಂದ ಐಶ್ವರ್ಯ ಅಲಂಕಾರ ಮುಂತಾದ್ದೆಲ್ಲಾ ಕತ್ತಿಯ ಹಿಡಿಕೆ ಒರೆ ಗಳಂತಹುದೇ ಎಂದಾಯಿತಪ್ಪೆ ? ಈ ದಿನ ನಡೆದ ಸ್ವಯಂವರ ಮಂಟಪದ ಗಜ ಘಟನೆಯಲ್ಲಿ ದೊಡ್ಡ ದೊಡ್ಡ ಅಂದ ಆಡಂಬರಗಳಿಂದ ಬಂದ ರಾಜ ಕುಮಾರರೆಲ್ಲರೂ ಆಪತ್ತಿಗೆ ಹೆದರಿ ಓಡಿ ಹೋಗಿ ದ್ದಾರೆ. ವೀರಸೇನನು ಜೀವದ ಹಂಗುದೊರೆದು ಮುಂದೆ ಬಂದು ನಮ್ಮೆಲ್ಲರನ್ನೂ ಕಾಪಾಡಿದ್ದಾನೆ. ಯುದ್ಧದಲ್ಲಿ ವೀರನಿಗೆ ಕತ್ತಿಯ ಹಾಗೆಯೇ ಜೀವನದಲ್ಲಿ ಸ್ತ್ರೀಗೆ ತ್ಯಾಗಿಯೂ, ವೀರನೂ ಆದವನು ಗಂಡನಾಗಿ ಲಭಿಸುವುದು ದೊಡ್ಡ ಅದೃಷ್ಟ ತಾನೇ ? ಅಂತಹ ವನು ನಮ್ಮ ಆಸ್ಥಾನದವನೇ ಆಗಿರುವಾಗ ಇನ್ನು ಸ್ವಯಂವರವೇತಕ್ಕೆ ಅಪ್ಪಾ ?" ಎಂದಳು ಕಳಾವತಿ.

ಕುಮಾರಿಯ ಮನೋಭಾವವನ್ನು ತಿಳಿದು ಗಜ ವರ್ಮ ರಾಜನು ಆನಂದದಿಂದ ಆಶೀರ್ವದಿಸಿ, ವೀರಸೇನನೊಂದಿಗೆ ಅವಳ ವಿವಾಹವನ್ನು ವೈಭವ ದಿಂದ ನೆರವೇರಿಸಿದನು.





# ವ್ಯರ್ಥವಾದ ನ್ಯಾಯಪೀಠ

ಒಂದು ಕಾಲದಲ್ಲಿ ಕುಂದಣಪುರವನ್ನಾಳುವ ಚಂದನ ಮಹಾರಾಜನಿಗೆ ಒಂದು ಕೊರತೆ ಹೃದಯದೊಳಗೇ ಕೊರೆದುಕೊಂಡಿತ್ತು. ತಾನು ನ್ಯಾಯವನ್ನು ನೂರಕ್ಕೆ ನೂರರಷ್ಟು ನಡೆಯುವಂತೆ ಮಾಡಬೇಕೆಂಬುದು ಅವನ ಉದ್ದೇಶ. ಸಾಧಾರಣವಾಗಿ ಅದು ಸಾಧ್ಯವಾಗುತ್ತಿರಲಿಲ್ಲ. ಏಕೆಂದರೆ, ನ್ಯಾಯ ನಿರ್ಣಯ ಮಾಡುವವರೆಲ್ಲ ಮಾನವರೇ ಆದುದರಿಂದ, ಇನ್ನೊಬ್ಬರ ಮನಸ್ಸನ್ನು ತಿಳಿಯುವ ಶಕ್ತಿ ಮಾನವರಿಗಿಲ್ಲದುದರಿಂದ, ಎಷ್ಟು ಸಾಕ್ಷಿಗಳಿದ್ದರೂ ನ್ಯಾಯಾಧೀಶರು ತಪ್ಪಿಬೀಳಲು ಅವಕಾಶವಿದ್ದೇ ಇರುತ್ತದೆ. ಅದರಿಂದ ಪೂರ್ತಿ ನ್ಯಾಯವು ನೆರವೇರಿತೆಂಬ ತೃಪ್ತಿ ಸಿಗಲಾರದು.

ಈ ಲೋಪವು ನಡೆಯುದಂತಿರಲು, ಕಡೆಗೆ ಚಂದನ ರಾಜನು ಅರಣ್ಯಕ್ಕೆ ಹೋಗಿ ಧರ್ಮದೇವತೆಯನ್ನು ಕುರಿತು ಬಹಳ ಕಾಲ ತೀವ್ರವಾಗಿ ತಪಸ್ಸು ಮಾಡಿಕೊಂಡಿದ್ದನು.

ಧರ್ಮದೇವತೆ ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷಳಾಗಿ ಏನು ವರ ಬೇಕೆಂದು ರಾಜನನ್ನು ಕೇಳಿದಳು. ರಾಜನು ತನಗೊಂದು ನ್ಯಾಯಪೀಠ ಬೇಕೆಂದೂ, ಯಾರಾದರೂ ಅದರ ಮೇಲೆ ನಿಂತು ಸುಳ್ಳು ಹೇಳಿದರೆ ಅವರಿಗೆ ಘೋರವಾದ ವಿಕಾರರೂಪ ಬರಬೇಕೆಂದೂ ಕೇಳಿಕೊಂಡನು.

ಧರ್ಮದೇವತೆ ರಾಜನಿಗೆ ಅಂತಹ ನ್ಯಾಯಪೀಠವನ್ನು ಕೊಟ್ಟು ಅಂತರ್ಧಾನಳಾದಳು. ರಾಜನು ಮೇಳತಾಳ ಮೆರವಣಿಗೆಯೊಂದಿಗೆ ತಂದು, ಅದನ್ನು ನ್ಯಾಯ ಸಭಾ ಮಂಟಪದಲ್ಲಿ ಸ್ಥಾಪಿಸಿದನು. ಅದರ ಮಹತ್ವವು ಎಲ್ಲರಿಗೂ ತಿಳಿಯುವಂತೆ ವಿವರಿಸಿ ಹೇಳಿಸಿದನು.

ಹಾಗಾದರೂ ನ್ಯಾಯಪೀಠದ ಮೇಲೆ ನಂಬುಗೆ ಇಲ್ಲದ ಕೆಲವರು ಇದ್ದೇ ಇದ್ದರು. ಸುಮ್ಮನೆ ಹೆದರಿಸಲಿಕ್ಕಾಗಿ ಇರಿಸಿದ ಪೀಠವದು, ಎಂದುಕೊಂಡು ಅಂಥವರು ಅದರ ಮೇಲೆ ನಿಂತು ಸುಳ್ಳು ಹೇಳಿ ವಿಕಾರಾಕಾರ ಹೊಂದಿ ಬುದ್ಧಿ ತಂದುಕೊಂಡರು. ಅದರಿಂದ ಎಲ್ಲರಿಗೂ ಅದರ ಮೇಲೆ ನಂಬುಗೆಯುಂಟಾಯಿತು.

ರಾಜನಿಗೆ ಈಗ ಪರಮ ತೃಪ್ತಿ. ತಾನು ಧರ್ಮವನ್ನು ಸರಿಯಾಗಿ ನಾಲ್ಕು ಪಾದಗಳಲ್ಲಿ ನಿಲ್ಲಿಸುವವನಾದೆನೆಂದೂ, ನೂರಕ್ಕೆ ನೂರು ನ್ಯಾಯವನ್ನು



ನಡೆಸುವವನಾದೆನೆಂದೂ ತೃಪ್ತಿಯುಂಟಾಯಿತು. "ನಾನೀಗ ಕಣ್ಣು ಮುಚ್ಚಿ ನ್ಯಾಯ ನಿರ್ಣಯ ಮಾಡಬಲ್ಲೆನು. ಇನ್ನು ಮೇಲೆ ನನ್ನ ಪರಿಪಾಲನೆಯಲ್ಲಿ ಅನ್ಯಾಯ ನಡೆಯಲಿಕ್ಕೆ ಸಾಧ್ಯವೇ ಇಲ್ಲ" ಎಂದು ರಾಜನು ಮಂತ್ರಿ ಸಾಮಂತರ ಒಂದು ಸಭೆಯಲ್ಲಿ ತನ್ನ ಹೆಚ್ಚಳಿಕೆಯನ್ನು ಹೇಳಿಕೊಂಡನು.

ಅದನ್ನು ಕೇಳಿ ಮಂತ್ರಿ ನಗುತ್ತ, "ಮಹಾರಾಜಾ! ಮಾನವರ ಬುದ್ಧಿ ಸಾಮಾನ್ಯವಾದುದಲ್ಲ. ಕುರುಡುತನದಿಂದ ನ್ಯಾಯಪೀಠವನ್ನೇ ನಂಬಿರುವುದು ಸರಿಯೆನಿಸದು. ಇದನ್ನು ಸಹಾ ವಂಚಿಸಿ ಯಾರಿಗಾದರೂ ಅನ್ಯಾಯ ಮಾಡಲು ಸಾಧ್ಯವಿದೆ, ಪೂರ್ವಾಪರ ವಿಚಾರಣೆ ನಡೆಸಲೇಬೇಕು" ಎಂದನು.

ರಾಜನಿಗೆ ದೊಡ್ಡ ಕೋಪ ಬಂದಿತು. "ಧರ್ಮದೇವತೆ ಅನುಗ್ರಹಿಸಿದ ನ್ಯಾಯ ಪೀಠವನ್ನು ಹೀಗೆ ಅವಮಾನಿಸುವುದಕ್ಕಿಂತಲೂ ಹೆಚ್ಚಿನ ಅತ್ಯಾಚಾರವಿಲ್ಲ. ಇದನ್ನು ವಂಚಿಸಿ ಅನ್ಯಾಯ ಮಾಡಬಹುದೆಂಬುದನ್ನು ಮೂರು ದಿನಗಳೊಳಗೆ ನಿರೂಪಿಸದೆ ಹೋದರೆ ನಿನ್ನ ತಲೆ ಹಾರಿಸುತ್ತೇನೆ" ಎಂದನು ಮಂತ್ರಿಯನ್ನು ನೋಡಿ.

ಕುಂದಣಪುರದಲ್ಲಿ ಹೇಮಕುರಂಗಿ ಎಂಬ ಸುಂದರಿಯಾದ ಸ್ವತಂತ್ರ ಯುವತಿಯೊಬ್ಬಳಿದ್ದಳು. ಧನಿಕಳಾದ ಅವಳಿಗೆ ತಾಯಿ ತಂದೆಯರಾರೂ ಇರಲಿಲ್ಲ. ತನ್ನಷ್ಟು ಸುಂದರಿ ಯಾರೂ ಇಲ್ಲವೆಂಬ ಗರ್ವದೊಂದಿಗೆ ತನಗೆ ತಕ್ಕ ವರನೂ ಇಲ್ಲವೆಂಬ ಅಹಂಕಾರವೂ ಅವಳಿಗಿತ್ತು. ರಾಜನಿಗೂ ಅವಳಿಗೂ ಒಂದೇ ಸಾರಿ ಗುಣಪಾಠ ಕಲಿಸಲಿಕ್ಕೆ ಇದೊಂದು ಸಂದರ್ಭ ಬಂದಿತೆಂದು ಮಂತ್ರಿಗೆ ತೋರಿತು.

ಮಂತ್ರಿ ಒಬ್ಬ ಯೋಗಿಯ ಹಾಗೆ ವೇಷ ಹಾಕಿಕೊಂಡು ಹೇಮಕುರಂಗಿಯ ಮನೆಯ ಇದಿರಿನಲ್ಲಿ ಕುಳಿತನು. ದಾರಿಯಲ್ಲಿ ಹೋಗುವವರ ಕೈಯಿಂದ ಹಣವನ್ನೂ, ಚಿನ್ನವನ್ನೂ ತೆಗೆದುಕೊಂಡು ಎರಡು ಪಾಲಾಗಿ ಹೆಚ್ಚಿಸಿ ಕೊಡುವೆನೆಂದು ಹೇಳುತ್ತ, ಹಾಗೆಯೇ ಮಾಡಿಕೊಡುತ್ತಿದ್ದನು ಆ ಯೋಗಿ. ಅವನು ಮಾಡಿಕೊಡುವ ಕೆಲಸವನ್ನು ನೋಡಿ ಹೇಮಕುರಂಗಿಗೂ ಲೋಭವೆದ್ದಿತು. ಅವಳು ರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಅವನ ಬಳಿಗೆ ಬಂದು, ತನ್ನ ಹತ್ತಿರವಿದ್ದ ಬಂಗಾರವನ್ನೂ, ರತ್ನಗಳನ್ನೂ ಅವನಿಗೆ ಕೊಟ್ಟು ಅವುಗಳನ್ನು ಇಮ್ಮಡಿಸಿ ಕೊಡುವಂತೆ ಬೇಡಿಕೊಂಡಳು.

ನಾಳೆ ಬೆಳಿಗ್ಗೆ ಹಾಗೆಯೇ ಮಾಡಿಕೊಡುವೆನೆಂದು ಹೇಳಿ ಯೋಗಿ ಅವಳನ್ನು ಕಳುಹಿಸಿದನು. ಆಮೇಲೆ ಅವಳು ಕೊಟ್ಟ ಬಂಗಾರವನ್ನೂ, ರತ್ನಗಳನ್ನೂ ತನ್ನ ದಂಡದೊಳಗಿನ ಟೊಳ್ಳು ಜಾಗದಲ್ಲಿ ಹಾಕಿ ಅಡಗಿಸಿಟ್ಟುಕೊಂಡನು.

ಯೋಗಿ ರಾತ್ರಿಯಲ್ಲಿ ಎಲ್ಲಿಗಾದರೂ ಓಡಿ ಹೋಗದಂತೆ ನೋಡಲು ಹೇಮಕುರಂಗಿ ತನ್ನ ನೌಕರನೊಬ್ಬನನ್ನು ನಿಯೋಗಿಸಿದ್ದಳು. ಬೆಳಗಾದೊಡನೆ

ಹೇಮಕುರಂಗಿ ಯೋಗಿಯ ಬಳಿಗೆ ಬಂದು, ಇಮ್ಮಡಿಯಾದ ತನ್ನ ಸೊತ್ತನ್ನು ಕೊಡುವಂತೆ ಕೇಳಿದಳು ಉತ್ಸಾಹದಿಂದ.

"ನಿನ್ನ ಸೊತ್ತು ಯಾವುದೂ ನನ್ನ ಹತ್ತಿರ ಇಲ್ಲವಲ್ಲಾ ?" ಎಂದನು ಯೋಗಿ ಆಶ್ಚರ್ಯ ನಟಿಸುತ್ತ.

ಹೇಮಕುರಂಗಿಗೆ ಕೋಪವೂ ದುಃಖವೂ ಒತ್ತೊತ್ತಿ ಬಂದಿತು. ಯೋಗೀಶ್ವರನೆಂದು ಇರುವುದನ್ನೆಲ್ಲಾ ನಂಬಿಕೊಟ್ಟರೆ ಎಂತಹ ಸುಳ್ಳು ಹೇಳುತ್ತಿದ್ದಾನೆ ? ಮಹಾರಾಜರ ಹತ್ತಿರ ಫಿರ್ಯಾದಿ ಮಾಡಲು ಯೋಗಿ ಕೂಡಾ ಬರಬೇಕೆಂದು ಹೇಳಿದಳು.

ಯೋಗಿ ಅದಕ್ಕೇನೂ ಅಭ್ಯಂತರ ಹೇಳದೆ, ಅವಳೊಂದಿಗೆ ರಾಜನ ಬಳಿಗೆ ಹೋದನು.

ಹೇಮಕುರಂಗಿ ಮಾಡಿದ ಫಿರ್ಯಾದಿಯನ್ನು ಕೇಳಿ ರಾಜನು ಯೋಗಿಗೆ ನ್ಯಾಯಪೀಠದ ಮೇಲೆ ನಿಂತು ಉತ್ತರ ಹೇಳುವಂತೆ ಹೇಳಿದನು. ಯೋಗಿ ತನ್ನ ದಂಡವನ್ನು ಹಿಡಿದುಕೊಳ್ಳುವಂತೆ ಹೇಮಕುರಂಗಿಯ ಕೈಗೆ ಕೊಟ್ಟು, ನ್ಯಾಯಪೀಠದ ಮೇಲೆ ಏರಿ, "ಈ ಹೇಮಕುರಂಗಿಯ ಬಿಡಿಗಾಸು ಸೊತ್ತು ಕೂಡಾ ನನ್ನ ಕೈಯಲ್ಲಿ ಇಲ್ಲ" ಎಂದು ಹೇಳಿ, ಯಾವ ವಿಕಾರಕ್ಕೂ ಒಳಗಾಗದೆ ನ್ಯಾಯಪೀಠದ ಮೇಲಿನಿಂದ ಕೆಳಗಿಳಿದನು.

ಇಂತಹ ಹಸಿಹಸೀ ಸುಳ್ಳನ್ನು ಕೇಳಿ ಹೇಮಕುರಂಗಿ ಅತ್ಯಾಕ್ರೋಶದಿಂದ, ಆ ದಂಡವನ್ನು ಕೈಯಲ್ಲಿ ಹಿಡಿದುಕೊಂಡೇ, ನ್ಯಾಯಪೀಠದ ಮೇಲೇರಿ, "ನನ್ನ ಬಂಗಾರವನ್ನೂ ರತ್ನಗಳನ್ನೂ ಈ ಯೋಗಿಗೆ ಕೊಟ್ಟಿದ್ದೇನೆ. ಅದನ್ನು ಈ ಕಳ್ಳಯೋಗಿ ನನಗೆ ಹಿಂದಿರುಗಿ ಕೊಡಲೇ ಇಲ್ಲ" ಎಂದು ಗಟ್ಟಿಯಾಗಿ ಕೂಗಿದಳು.

ಮರುಕ್ಷಣದಲ್ಲಿ ಅವಳ ರೂಪವು ಬಹಳ ವಿಕಾರವಾಗಿ ಹೋಯಿತು, ಸಭೆಯವರೆಲ್ಲಾ ನಗತೊಡಗಿದರು.

ಮಂತ್ರಿ ತನ್ನ ವೇಷವನ್ನು ಕಳಚಿಹಾಕಿ, ನಡೆದ ಸಂಗತಿಯನ್ನೆಲ್ಲ ರಾಜನೊಂದಿಗೆ ಹೇಳಿ, "ನೋಡಿದಿರಷ್ಟೇ, ನಿಮ್ಮ ನ್ಯಾಯಪೀಠವು ಈ ಹೇಮಕುರಂಗಿಗೆ ಮಾಡಿದ ಅನ್ಯಾಯವನ್ನು ?" ಎಂದನು.

ಹೇಮಕುರಂಗಿ ಬುದ್ಧಿಪೂರ್ವಕವಾಗಿ ಸುಳ್ಳು ಹೇಳಲಿಲ್ಲ. ತನ್ನ ಕೈಯಲ್ಲಿದ್ದ ದಂಡದೊಳಗೇ ತನ್ನ ಸೊತ್ತು ಇರುವುದೆಂದು ಅವಳಿಗೆ ಗೊತ್ತೇ ಇರಲಿಲ್ಲ. ಆದರೂ ಅವಳು ಕುರೂಪಿಯಾಗಿ ಹೋದಳು.

ಈ ಸಂಘಟನೆಯಿಂದ ರಾಜನಿಗೆ ಆ ನ್ಯಾಯಪೀಠದ ಮೇಲೆ ವಿರಕ್ತಿ ಹುಟ್ಟಿತು. ಅದನ್ನು ನ್ಯಾಯಾಸ್ಥಾನದಿಂದ ತೆಗೆಸಿ ಪ್ರದರ್ಶನ ಶಾಲೆಯ ವಸ್ತುಗಳೊಂದಿಗೆ ಸೇರಿಸಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೫ ಜನವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.





Subhash Sabnis — A. Govindarajulu

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ನವೆಂಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲುಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಸೆಪ್ಟೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಪುಟ್ಟನು ಕಣ್ರೀ, ಕಿವಿಗಳಿದ್ದದ್ರಿಂದ್ಲೇ ಓದೋದು

ಎರಡನೇ ಫೋಟೋ : ಈ ಗುಟ್ಟಿನ ಮಾತು ಅಮ್ಮಗೆ ಹೇಳ್ಬೇಡ ಕಣೆ!

ಕಳುಹಿಸಿದವರು : ಕುಮಾರಿ ಗಾಯತ್ರಿ, ಬಿ. ಎಂ. ಬೀರೂರು, ೫೭೭ ೧೧೬

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ? ಉತ್ತರಗಳು :

೧. ರಾಮೇಶ್ವರ ದೇವಾಲಯ. ೨. ತಂಜಾವೂರಿನ ಬೃಹದೀಶ್ವರಾಲಯದಲ್ಲಿ. ೩. ಒರಿಸ್ಸಾದ ಕೋಣಾರ್ಕ್ ದೇವಾಲಯ. ಇಲ್ಲಿಯ ಆಲಯ ನಿರ್ಮಾಣವು ಪೂರ್ತಿಯಾದ ಕೂಡಲೇ ಧರ್ಮಪಾದನೆಂಬ ಬಾಲನು ಸಮುದ್ರದಲ್ಲಿ ಬಿದ್ದು ಪ್ರಾಣ ಬಿಟ್ಟನು. ೪. ಕೊಚ್ಚಿನ್.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




## ೧೮

[ ಪಿಂಗಳನು ಅವಂತೀ ನಗರವನ್ನು ತಲಪುವಾಗ ತಾಯಿಯ ಸ್ಥಿತಿ ಬಹಳ ಹೀನವಾಗಿತ್ತು. ಅವಳಿಂದ ಎಲ್ಲಾ ಸಂಗತಿಯನ್ನೂ ತಿಳಿದು, ಭಲ್ಲೂಕಕೇತುವಿನ ಮೂಲಕ ಸೆರೆಯಲ್ಲಿ ತನ್ನ ಅಣ್ಣಂದಿರನ್ನೂ, ರಾಜನ ಧನಾಗಾರದ ಧನವನ್ನೂ, ಮಹತ್ವದ ಚೀಲವನ್ನೂ ತನ್ನ ಬಳಿಗೆ ತರಿಸಿದನು. ತರುವಾಯ ಪಿಂಗಳನ ಆಜ್ಞೆಯಂತೆ ಭಲ್ಲೂಕಕೇತು, ತನ್ನ ಪಿಶಾಚಿ ಅನುಚರರೊಂದಿಗೆ ಒಂದು ಅಪೂರ್ವ ಭವನವನ್ನು ಕಟ್ಟಿಸಲು ತಯಾರಾದನು. ]

**ಕೆ**ತ್ತಲಾದ ಕೂಡಲೇ ಭಲ್ಲೂಕಕೇತು ತನ್ನ ಭಯಂಕರ ರೂಪದ ಬೇರೆ ಬೇರೆ ಶಿಲ್ಪ ಪಿಶಾಚಗಳೊಂದಿಗೆ ಭವನ ಕಟ್ಟಬೇಕಾದ ಜಾಗದಲ್ಲಿ ಸೇರಿದನು. ನಾಯಕನಾದ ಭಲ್ಲೂಕಕೇತು ಹೇಳಿದಂತೆ ನದೀ ತೀರದ ವಿಸ್ತಾರ ಪ್ರದೇಶವನ್ನು ಪಿಶಾಚ ಕರ್ಮಚಾರಿಗಳು ನಿಮಿಷ ಮಾತ್ರದಲ್ಲಿ ಹಸನು ಮಾಡಿದರು, ಆದರ ಬೆನ್ನಿಗೇ ನೂರಾರು ಸಾವಿರಾರು ಪಿಶಾಚಿಗಳು ಅಡಿಪಾಯ ತೋಡಿ ಗೋಡೆ ಎಬ್ಬಿಸಿದುವು. ಕೂಲೀ ಪಿಶಾಚಿಗಳು ಬಹು ಚುರುಕಾಗಿ ಓಡಾಡಿದುವು. ಕಲ್ಲು ಕೆತ್ತುವ ಶಬ್ದಗಳು, ಸಿಗಿಯುವ ಶಬ್ದ ಒಂದೇ ಸಮನೆ ಹೊರಟುವು. ಅದರೊಂದಿಗೇ ಕಟ್ಟಡವು ನಾಲ್ಕು ಸುತ್ತಲಿಂದಲೂ ಕ್ಷಣೇ ಕ್ಷಣೇ ಏರುತ್ತಿತ್ತು.

ಇದ್ದಕ್ಕಿದ್ದ ಹಾಗೆ ನದೀ ತೀರದಲ್ಲಿ ಹೊರಡುವ ಆ ವಿಚಿತ್ರ ಶಬ್ದಗಳ ಕೋಲಾಹಲವನ್ನು ಕೇಳಿ, ಅವಂತಿ ನಗರದ ಕಾವಲುಗಾರರು ಬೇಗನೆ ಅಲ್ಲಿ ಏನು ನಡೆಯುವುದೆಂದು ನೋಡಲು ಹೋದರು. ಅವರೊಂದಿಗೆ ಅನೇಕರು ಸೇರಿಕೊಂಡರು. ಹಾಗೆ ಬಂದ ಅನೇಕರನ್ನು ಭಲ್ಲೂಕಕೇತುವಿನ ಪಿಶಾಚಿಗಳು ಹಿಡಿದು ಎಳೆದು ಬಲವಂತವಾಗಿ ಭವನ ನಿರ್ಮಾಣದ ಕೆಲಸದಲ್ಲಿ ಕೂಲಿಗಳಾಗಿ ಉಪಯೋಗಿಸಿಕೊಂಡರು.



ಅವುಗಳನ್ನು ಇದಿರಿಸಿ ಕತ್ತೀ ಕಠಾರಿ ಎತ್ತಿದ ರಾಜ ಭಟರನ್ನು ಗುದ್ದಿ ಗುದ್ದಿ ಮೆತ್ತಗೆ ಮಾಡಿ ಓಡಿಸಿ ಬಿಟ್ಟವು. ಈ ಅದ್ಭುತ ವಾರ್ತೆ ಊರೊಳಗೆಲ್ಲಾ ಬಿರುಗಾಳಿಯಂತೆ ಹರಡಿತು.

ಬೆಳಗಾಗಿ ಸೂರ್ಯೋದಯವಾಗುವ ಹೊತ್ತಿಗೆ ದಿವ್ಯವೂ ಭವ್ಯವೂ ಆದ ಮಹಾ ಭವನವು ಆಕಾಶ ವನ್ನು ಮುದ್ದಿಸುವಂತೆ ಕಂಗೊಳಿಸುತ್ತಿತ್ತು. ಅರ ಮನೆಯನ್ನು ನಾಚಿಸುವಂತಿರುವ ಮತ್ತೊಂದು ರಾಜಭವನ. ಪಿಂಗಳನು ತಾಯಿಯನ್ನೂ ಅಣ್ಣಂದಿ ರನ್ನೂ ಕರೆದುಕೊಂಡು ಆ ಭವನದೊಳಗೆ ಪ್ರವೇಶ ಮಾಡಿದನು. ಬಾಲಸೂರ್ಯನ ಎಳೆಕಿರಣಗಳ ಕಾಂತಿ ಯಲ್ಲಿ ಆ ಭವನವು ಬಂಗಾರದ ನೀರನ್ನು ಅಭಿಷೇಕ ಮಾಡಿಸಿಕೊಂಡಂತೆ ಥಳಥಳನೆ ಹೊಳೆಯುತ್ತಿದ್ದಿತು. ಅದನ್ನು ನೋಡಲು ಕುತೂಹಲ ತುಂಬಿದ ಜನರು ಎಲ್ಲೆಲ್ಲಿಂದಲೋ ಸಾಲುಸಾಲಾಗಿ ಬರುತ್ತಿದ್ದರು. ಪಿಂಗಳನು ಭಲ್ಲೂಕಕೇತುವಿನ ಅನುಚರರಲ್ಲಿ ಐವತ್ತು ಮಂದಿಯನ್ನು ಮಾತ್ರ ತನಗೂ ತನ್ನ ಭವನಕ್ಕೂ ಕಾವಲು ಕಾಯಲು ಇಟ್ಟುಕೊಂಡು, ಉಳಿದೆಲ್ಲರನ್ನೂ ಭಲ್ಲೂಕ ಪರ್ವತಕ್ಕೆ ಕಳುಹಿಸಿ ಬಿಟ್ಟನು. ಭಲ್ಲೂಕಕೇತು ಮೊತ್ತ ಭವನದ ಆವರಣದ ಬಾಗಿಲನ್ನು ತೆರೆದಿಟ್ಟು ಕಬ್ಬಿಣದ ಸರಳುಗಳಿರುವ ಬಾಗಿಲನ್ನು ಮುಚ್ಚಿ, ಬದಿಯಲ್ಲೊಂದು ಕಲ್ಲಿನ ಕುರ್ಚಿಯಲ್ಲಿ ಕಾವಲು ಕಾಯಲು ವಿಗ್ರಹದ ಹಾಗೆ ಕುಳಿತುಕೊಂಡನು. ಅವನನ್ನು ನೋಡಿದರೆ ಭವನ ದೊಳಗೆ ಹೋಗಲು ಯಾರಿಗೂ ಧೈರ್ಯಬಾರದು.

ಅಷ್ಟು ಹೊತ್ತಿಗೆ ಅತ್ತ ಅವಂತೀ ನಗರದ ರಾಜ ಭವನದಲ್ಲಿ ಕಲಕಲರವವೇಳಲು ಪ್ರಾರಂಭವಾಗಿತ್ತು. ರಾತ್ರಿಯಲ್ಲಿ ಭಲ್ಲೂಕಕೇತು ಕಟ್ಟಿಸಿಕೊಂಡಿದ್ದ ಭವನ ವನ್ನು ನೋಡಲು ಹೋಗಿ, ಅಲ್ಲಿದ್ದ ಪಿಶಾಚಿಗಳ ಕೈಯಲ್ಲಿ ಪೆಟ್ಟು ತಿಂದು ಓಡಿಬಂದ ರಕ್ಷಕಭಟ ನಾಯಕನೊಬ್ಬನು, ಮಂತ್ರಿಯ ಹತ್ತಿರ ಹೋಗಿ ತನ್ನ ಅನುಭವವನ್ನು ಮೊರೆ ಇಟ್ಟುಕೊಂಡನು. ಅಲ್ಲಿ ಏಳುತ್ತಿರುವ ಭವನವನ್ನೂ, ಕೆಲಸ ಮಾಡು ತ್ತಿರುವ ಅದ್ಭುತ ಶಿಲ್ಪಿಗಳನ್ನೂ, ಕೂಲೀ ಪಿಶಾಚಿ ಗಳನ್ನೂ ಕುರಿತು ಹೇಳುವುದನ್ನು ಕೇಳಿ, ಮಂತ್ರಿಗೆ ಅವನ ಬುದ್ಧಿಯ ಸ್ಥಿಮಿತದ ಮೇಲೆ ಸಂದೇಹ ಬಂದಿತು. ಯಾವುದೋ ಕೆಟ್ಟ ಸ್ವಪ್ನ ನೋಡಿ ಭ್ರಮಿಸಿ ಹುಚ್ಚನಾದನೇನೋ ಅನಿಸಿತು.

"ನೀನೇನು ಬೊಗುಳವಿಯೆಂದು ನಿನಗೆ ಅರ್ಥ ವಾಗುತ್ತಿದೆಯೇ? ರಾತ್ರಿ ಕುತ್ತಿಗೆ ಗುಳಿಯವರೆಗೂ ಕುಡಿದು ಏನೇನೋ ಹುಚ್ಚುಚ್ಚು ಕನಸು ಕಂಡಿ ಯೇನು? ಮನೆಗೆ ಹೋಗಿ ಸ್ವಲ್ಪ ಹೊತ್ತು ಬಿದ್ದುಕೋ. ಮತ್ತು ಇಳಿದ ಮೇಲೆ ಬಂದು ಮಾತಾಡುವಿಯಂತೆ. ಸುಮ್ಮನೆ ಹರಟೆ ನಮ್ಮನ್ನೆಲ್ಲ ಹುಚ್ಚರಾಗುವಂತೆ ಮಾಡಬೇಡ. ನಿನ್ನ ಈ ಬೊಗಳು ಮಹಾರಾಜರಿಗೆ ತಿಳಿದರೆ ನಿನಗೆ ಕಾರಾಗಾರ ಶಿಕ್ಷೆ ತಪ್ಪದು" ಎಂದನು ಮಂತ್ರಿ.



"ನನಗೆ ಹಾಗೇನೂ ಆಗಿಲ್ಲ ಮಹಾ ಮಂತ್ರಿಯವರೇ. ಅದಾವುದಕ್ಕೂ ವ್ಯವಧಿಯಿಲ್ಲದಂತೆ ರಾತ್ರಿಯ ದೃಶ್ಯವಿತ್ತು. ನಮ್ಮ ಭಟರಲ್ಲಿ ಕೆಲವರು ಅವರಿಗೆ ಖೈದಿಗಳಾಗಿ ಸಿಕ್ಕಿಬಿದ್ದಿದ್ದಾರೆ. ಆ ಪಿಶಾಚಿಗಳ ಕೈಯಲ್ಲಿ ಪೆಟ್ಟು ತಿಂದು ತಪ್ಪಿಸಿಕೊಂಡು ಓಡಿ ಬಂದವನು ನಾನೊಬ್ಬನೇ ಅಲ್ಲ. ಅಷ್ಟೆಲ್ಲ ಬೇಡ. ನೀವೇ ಕೋಟೆಬುರುಜಿನ ಮೇಲೆ ಹತ್ತಿ ನದಿಯ ಕಡೆಗೆ ನೋಡಿರಿ. ಅಲ್ಲಿರುವ ಮಹಾ ಭವನವು ನಿಮಗೇ ಕಾಣುತ್ತದೆ!" ಎಂದನು ರಕ್ಷಕ ಭಟರ ನಾಯಕ.

ಮಂತ್ರಿ ಬೇಗ ಬೇಗನೆ ಕೋಟೆಯ ಬುರುಜು ಹತ್ತಿ ನೋಡಿದನು. ದೂರದಲ್ಲಿ ನದೀ ತೀರದಲ್ಲಿ ಈವರೆಗೆ ಕಾಣದ ಭವ್ಯವಾದ ಮಹಾ ಭವನದ ದೃಶ್ಯವು ಕಾಣುತ್ತಿದ್ದಿತು. ಅವನ ಆಶ್ಚರ್ಯಕ್ಕೆ ಮೇರೆಯಿಲ್ಲದೆ ಹೋಯಿತು! "ಇದೇನು ಅದ್ಭುತ!" ಎಂದುಕೊಂಡು ತಾನು ನಿದ್ದೆಯಲ್ಲಿರುವೆನೋ, ಎಚ್ಚರದಲ್ಲಿರುವೆನೋ ಎಂದು ತಲೆ ಕೊಡರಿಕೊಳ್ಳುತ್ತ ಮಂತ್ರಿ ಬುರುಜಿನಿಂದ ಕೆಳಗಿಳಿದು ಬಂದನು.

ಆಗ ಕೋಶಾಧಿಕಾರಿ ಲಬೊಲಬೋ ಬೊಬ್ಬಿಡುತ್ತಾ ಓಡಿ ಬಂದು, "ಅಯ್ಯೋ! ಮಹಾ ಮಂತ್ರಿಯವರೇ! ಸರ್ವನಾಶವಾಯಿತು! ಕೋಶಾಗಾರದಲ್ಲಿ ಬಿಡಿಗಾಸು ಕೂಡಾ ಇಲ್ಲ! ಗುಡಿಸಿ ಒರೆಸಿ ಹೋದ ಹಾಗೆ ಭಾರಿ ಕಳ್ಳತನವಾಗಿದೆ! ಹೇಗಾಯಿತೋ ಗೊತ್ತಾಗುವುದಿಲ್ಲ!" ಎಂದನು.

"ಆ! ಕೋಶಾಗಾರವು ಪೂರ್ತಿ ಖಾಲಿಯೇ! ಅದರ ಕಾವಲುಗಾರರೇನಾದರು? ಕರೆ ಅವರನ್ನೆಲ್ಲಾ! ಅವರೇನು ನಿದ್ದೆ ಮಾಡಿಕೊಂಡಿದ್ದರೋ? ಅಥವಾ ಕುಡಿದು ಕುಪ್ಪಳಿಸಿ ಕುಣಿಯಲು ಹೋದರೋ?" ಎಂದು ಗರ್ಜಿಸಿದನು ಮಂತ್ರಿ.

"ಕಾವಲಿನವರದು ಯಾವ ತಪ್ಪೂ ಇಲ್ಲ ಪ್ರಭುಗಳೇ. ಕೋಶಾಗಾರದ ಬಾಗಿಲು ಮುಚ್ಚಿದ್ದು ಮುಚ್ಚಿದ ಹಾಗೆಯೇ ಇದೆ. ಬೀಗಗಳೂ ಇದ್ದ ಹಾಗೇ ಇವೆ. ಎಲ್ಲವೂ ಒಳಗಿಂದೊಳಗೇ ಮಾಯ! ಭೂಮಿಯಡಿಯಲ್ಲಿ ಏನೋ ಆಗಿರಬೇಕು" ಎಂದನು ಕೋಶಾಧಿಕಾರಿ ಆಕಾಶ ನೋಡುತ್ತ.

"ಅದು ಹೇಗೆ? ಎಲ್ಲಾದರೂ ಉಂಟೆ?" ಎಂದು ಮಂತ್ರಿ ಕೋಶಾಧಿಕಾರಿಯನ್ನು ಕಣ್ಣು ಕೆಕ್ಕರಿಸಿ ನೋಡಿ, "ಕೋಶಾಗಾರವೆಲ್ಲಾ ಪೂರಾ ಖಾಲಿ ಎನ್ನಲು ಎಷ್ಟು ಧೈರ್ಯ ನಿನಗೆ? ಈ ಮಾಯೆಗೆ ನೀನು ಅನುಭವಿಸಬೇಕಾದ್ದು ಗಲ್ಲಿನ ಶಿಕ್ಷೆ. ಗೊತ್ತಿದೆಯೋ? ಮಹಾರಾಜರ ಬಳಿಗೆ ನಡೆ! ಎಂದು ಮಂತ್ರಿ ಹೂಂಕಾರ ಮಾಡಿದನು.

ಮಂತ್ರಿ ಕೋಶಾಧಿಕಾರಿಯೊಂದಿಗೆ ರಾಜನ ಹತ್ತಿರ ಹೋದಾಗ, ಅಲ್ಲಿಯೂ ಒಂದು ಗಲಾಟೆ ಎದ್ದಿತ್ತು. ಅದೇನೆಂದು ತಿಳಿಯುವುದರೊಳಗೆ, ಕಾರಾಗಾರಾಧಿಪತಿ ಶೋಕಮುದ್ರೆಯಿಂದ "ಮಹಾ ಮಂತ್ರೀ...." ಎಂದು ಕೂಗುತ್ತಾ ಓಡಿಬಂದು, "ಮಹಾ ವಿಪತ್ತು



ನಡೆಯಿತು. ಆ ಜೀವದತ್ತ, ಲಕ್ಷದತ್ತರೆಂಬ ದೊಡ್ಡ ಖೈದಿಗಳು ಆರ್ತನಾದ ಮಾಡಿಕೊಂಡಿದ್ದವರು, ಸೆರೆಮನೆಯ ಒಳಗಿಂದೊಳಗೇ ಮಾಯವಾಗಿದ್ದಾರೆ! ನನ್ನನ್ನು ಕ್ಷಮಿಸಬೇಕು ಪ್ರಭೂ! ಕಾವಲುಗಾರರೆಲ್ಲ ಎಚ್ಚರದಲ್ಲೇ ಇದ್ದರೂ ಅವರುಗಳು ಗಾಳಿಯಾಗಿ ಹಾರಿಹೋಗಿದ್ದಾರೆ! ಬೇರೆ ರೀತಿ ಅವರು ಮಾಯವಾಗಲು ಸಾಧ್ಯವೇ ಇಲ್ಲ" ಎಂದು ಗೋಳಿಟ್ಟನು.

ಅದನ್ನು ಕೇಳಿ ಮಂತ್ರಿ ಅವನನ್ನು ಕಣ್ಣು ಕೆಕ್ಕರಿಸಿ ನೋಡುತ್ತ, "ಮಚ್ಚುಬಾಯಿ! ಆ ಜೀವದತ್ತ ಲಕ್ಷದತ್ತರು ದೇವತೆಗಳೇನು? ಗಾಳಿಯಾಗಿ ಹಾರಿಹೋಗುವುದೆಂದರೇನೋ ಅದು? ಹುಚ್ಚ! ನೋಡದ್ದೆಲ್ಲಾ ನಮ್ಮ ಮುಂದೆ ಹೇಳುವಿಯಾ?" ಎಂದನು.

"ಅಲ್ಲಲ್ಲ! ಗಾಳಿಯಾಗಿ ಹಾರಿಹೋದದ್ದು ಅಲ್ಲ. ಮೊದಲು ಹಾಗೇ ಅಂದುಕೊಂಡು ಒಳಗೆ ಹೋಗಿ ನೋಡಿದರೆ, ಕೋಣೆಯ ಮಧ್ಯದಲ್ಲಿ ದೊಡ್ಡದೊಂದು ಗುಹೆ ಇದೆ. ಅದು ಮನುಷ್ಯರು ಮಾಡಿದ ಗುಹೆಯಂತೂ ಅಲ್ಲ. ಶಬ್ದವೇ ಇಲ್ಲದೆ ಯಾವ ರಾಕ್ಷಸರೋ ಮಾಡಿದ್ದು!" ಎಂದನು ಕಾರಾಗಾರಾಧಿಪತಿ.

ಮಂತ್ರಿ ಆಲೋಚನೆಗೆ ಬಿದ್ದನು. ನದೀ ತೀರದಲ್ಲಿ ಒಂದೇ ರಾತ್ರಿಯಲ್ಲಿ ಮಹಾ ಭವನದ ನಿರ್ಮಾಣ! ರಕ್ಷಕ ಭಟಾಧಿಕಾರಿಯ ಅನುಭವ, ಸೆರೆಮನೆಯ ವಿಚಿತ್ರ. ಇದನ್ನೆಲ್ಲ ನೋಡುವಾಗ, ಇದು ಸಾಮಾನ್ಯ ಮಾನವರ ಕೆಲಸವಲ್ಲವೆಂದು ಮಂತ್ರಿಗೆ ಅರ್ಥವಾಯಿತು. ಖೈದಿನಲ್ಲಿದ್ದ ಜೀವದತ್ತ ಲಕ್ಷದತ್ತರಿಗೆ ಪಿಂಗಳನೆಂಬ ದೊಡ್ಡ ಮಾಂತ್ರಿಕ ತಮ್ಮನಿರುವಂತೆ, ಅವನಿಗೆ ಈ ಅಣ್ಣಂದಿರು ದ್ರೋಹ ಮಾಡಿದಂತೆ ಮಂತ್ರಿಗೆ ಗೊತ್ತಿತ್ತು. "ಈಗ ನಡೆದುದೆಲ್ಲ ಮಹಾರಾಜರೊಂದಿಗೆ ಹೇಳುವುದೇ ಉಚಿತ. ಮಂತ್ರಗಾರನಾದ ಪಿಂಗಳನು ನಗರಕ್ಕೆ ತಿರುಗಿ ಬಂದಿರಬೇಕು" ಎಂದುಕೊಂಡನು ಮಂತ್ರಿ.

ರಾಜನ ಕೋಣೆಗೆ ಹೋದಾಗ, ಅಲ್ಲಿಯೂ ರಾಜನನ್ನು ಕಾಡುವ ಕಲ್ಲೋಲ ಬಯಲಾಯಿತು. "ನಿಜ ಸಂಗತಿ ಹೇಳಿರಿ. ನಿಮ್ಮೆಲ್ಲರನ್ನೂ ಶೂಲಕ್ಕೇರಿಸುತ್ತೇನೆ. ನನ್ನ ಹತ್ತಿರವಿದ್ದ ಅಮೂಲ್ಯವಾದ ಅದ್ಭುತದ ಚೇಲ ಎಲ್ಲಿಗೆ ಹೋಯಿತು?" ಎಂದು ರಾಜನು ಇದಿರಿನಲ್ಲಿ ನಿಂತಿದ್ದ ಸೇವಕರನ್ನು ಗದರಿಸಿ ಕೇಳುತ್ತಿದ್ದನು, ಅವರೆಲ್ಲಾ ರಾಜನ ಪಾಕಶಾಲೆಯ ಆಳುಗಳು. ಎಲ್ಲರೂ ಏನೂ ಹೇಳದೆ ಒಬ್ಬರನ್ನೊಬ್ಬರು ನೋಡುತ್ತ ನಡುಗಿಕೊಂಡಿದ್ದರು. ಅವರೆಲ್ಲರಿಗೂ ಭಯದಿಂದ ಬಾಯಿಯ ಪಸೆ ಪೂರಾ ಆರಿಹೋಗಿತ್ತು.

ಮಂತ್ರಿಯನ್ನು ನೋಡಿದ ಕೂಡಲೇ ಮಹಾರಾಜನು, "ಸರಿಯಾದ ಸಮಯಕ್ಕೆ ಬಂದೆ ಮಂತ್ರೀ. ಇವರೆಲ್ಲರನ್ನೂ ಕಟ್ಟುಹಾಕಿಸಿ ಸಾಲಾಗಿ ಮಲಗಿಸಿ ಆನೆಯ ಕಾಲಿಂದ ತುಳಿಸಿಬಿಡಿರಿ. ಮಹಾ ದುಷ್ಟರು! ಕಳ್ಳರು! ನನ್ನ ಮಹತ್ವದ ಚೇಲವನ್ನು ಕದ್ದು ಬಚ್ಚಿಟ್ಟು ಕಾಣದೆ ಹೋಯಿತು ಅನ್ನುತ್ತಾರೆ! ನನ್ನ ಉಪ್ಪು

ತಿಂದು ನನಗೇ ದ್ರೋಹ ಮಾಡುತ್ತಾರೆ ! ಮೊದಲು ನಾಲಗೆ ಕತ್ತರಿಸಿ ಬಿಡಿರಿ ! " ಎಂದನು ಉದ್ರೇಕದಿಂದ.

" ಅಷ್ಟು ಮಾತ್ರವಲ್ಲ ಮಹಾ ಪ್ರಭೂ ! ಇನ್ನೂ ಅನೇಕ ಘೋರಗಳು ನಡೆದಿವೆ. ನದೀ ತೀರದಲ್ಲಿರುವುದನ್ನು ನೋಡಿದರೆ ತಾವೇನು ಹೇಳುವಿರೋ ! " ಎಂದು ಮಂತ್ರಿ ತನಗೆ ತಿಳಿದುದೆಲ್ಲವನ್ನೂ ರಾಜನೊಂದಿಗೆ ನಿವೇದಿಸಿದನು.

ಆದನ್ನೆಲ್ಲ ಕೇಳಿ ರಾಜನು ಮಹಾ ರೌದ್ರಾಕಾರನಾಗಿ, " ಹಾಗಾದರೆ ಆಲೋಚನೆ ಮಾಡಲಿಕ್ಕೇನಿದೆ ? ಭವನ ರಕ್ಷಕನೊಂದಿಗೆ ಐವತ್ತು ಮಂದಿ ವೀರ ಯೋಧ ಭಟರನ್ನು ಕಳುಹಿಸು. ಆ ಹೊಸ ಭವನದಲ್ಲಿದ್ದ ಎಲ್ಲರನ್ನೂ ಹೆಡೆಮುರಿಗೆ ಕಟ್ಟಿ ಇಲ್ಲಿಗೆ ತರಲಿ ! ನನ್ನ ಅನುಮತಿ ಇಲ್ಲದೆ ಹೇಗೆ ಕಟ್ಟಿದನೋ ನೋಡುತ್ತೇನೆ " ಎಂದು ಆಜ್ಞೆ ಮಾಡಿದನು.




" ಮಹಾರಾಜಾ, ಇದು ಸಾವಧಾನವಾಗಿ ಆಲೋಚಿಸಿ ಮಾಡಬೇಕಾದ ಕೆಲಸ " ಎಂದು ಮಂತ್ರಿ ಏನೋ ಹೇಳಬೇಕೆಂದಿರಲು, ರಾಜನು ತಾಳ್ಮೆಗೆಟ್ಟು ಕಸಕ್ಕನೆ ರೇಗಿ, " ನೀನು ಆ ಮೋಡಿಗಾರ ಜಾಲರಿಗೇ ರಾಜ್ಯವನ್ನು ಕೊಟ್ಟು ಅವನಿಗೆ ಮಂತ್ರಿಯಾಗಿರಬೇಕೆಂದು ನೋಡುವಿಯೇನು ? " ಎಂದನು ತೀವ್ರ ಸ್ವರದಲ್ಲಿ ಕಣ್ಣು ತಿರುಗಿಸಿ.

ಮಂತ್ರಿ ಅದಕ್ಕೇನೂ ಉತ್ತರ ಕೊಡಲಿಲ್ಲ. ಆಗ ಅಲ್ಲಿಯೇ ಇದ್ದು ಇದನ್ನೆಲ್ಲ ಕೇಳುತ್ತಿದ್ದ ರಕ್ಷಕಭಟರ ಮುಖ್ಯಸ್ಥನೊಬ್ಬನು ಮುಂದೆ ಬಂದು, " ಮಹಾ ಪ್ರಭೂ ! ಪಿಂಗಳನನ್ನು ಕುದುರೆಗೆ ಕಟ್ಟಿ ಎಳೆದುಕೊಂಡು ಬರಲು ನನಗೆ ಅಪ್ಪಣೆ ಕೊಡಿರಿ ! " ಎಂದು ಕೇಳಿದನು.

" ಅವನನ್ನು ಕುದುರೆಗೆ ಕಟ್ಟಿ ಎಳೆಸಿಕೊಂಡು ಬಂದರೂ, ಕತ್ತೆಗೆ ಕಟ್ಟಿ ಎಳೆದುಕೊಂಡು ಬಂದರೂ ನನಗೆ ಒಂದೇ. ಅದು ಮಾತ್ರ ಸಾಲದು. ನನಗೆ ಬೇಕಾದುದು ಮಹತ್ವದ ಚೀಲ ಮತ್ತು ಧನಾಗಾರದಿಂದ ಕಳವಾಗಿ ಹೋದ ಧನ. ಅರ್ಥವಾಯಿತೆ ? " ಎಂದನು ರಾಜ ಕೋಪದಿಂದ.

ರಕ್ಷಕಭಟ ಮುಖ್ಯನು, " ಅಪ್ಪಣೆ ಪ್ರಭು " ಎಂದು ಹೇಳಿ, ಸಾಯುಧರಾದ ಐವತ್ತು ಮಂದಿ ಭಟರೊಂದಿಗೆ ಪಿಂಗಳನ ಹೊಸ ಭವನದ ಕಡೆಗೆ ಹೋದನು. ಹೊರಬಾಗಿಲ ಬಳಿಯಲ್ಲಿ ಕಲ್ಲಿನ ಕುರ್ಚಿಯ ಮೇಲೆ ಕುಳಿತುಕೊಂಡು, ತೂಕಡಿಸುತ್ತಿದ್ದ ಭಲ್ಲೂಕಕೇತುವನ್ನು ನೋಡಿದ ಕೂಡಲೇ ಭಟರು ಬೆದರಿಬಿದ್ದರು.

" ಅಯ್ಯಬ್ಬೋ ! ಇವನಾವನೋ ರಾಕ್ಷಸನಾಗಿದ್ದಾನೆ. ಹಗಲು ವೇಷಗಾರನಂತೆ ಕಾಣುತ್ತಾನೆ ! " ಎಂದುಕೊಳ್ಳುತ್ತ, ಭಟರ ನಾಯಕನು ಕುದುರೆಯ ಮೇಲೆ ಇದ್ದ ಹಾಗೆಯೇ ಭಲ್ಲೂಕಕೇತುವನ್ನು ಸಮೀಪಿಸಿದನು. ಅವನ ಈಟಿ ಭಲ್ಲೂಕಕೇತುವಿನ ತೋಳನ್ನು ತಿವಿಯಲು ಬಂತು. ಬಾಯಿಯಿಂದ, " ಲೋ ! ಮೊದ್ದು ಬಂಡೇ ಧಡಿಯಾ !



ಕಣ್ಣಿಲ್ಲದ ನೀನು ಎಂಥ ಕಾವಲುಗಾರ ! ಕಿವಿಯೂ ಕೇಳಿಸದ ಕಿವುಡಾ ! ಎದ್ದು ನಿಲ್ಲು !" ಎಂದನು.

ಭಲ್ಲೂಕಕೇತು ಕಣ್ಣು ತೆರೆದು ಒಂದು ಕೈಯಿಂದ ಈಟಿಯನ್ನು ಹಿಡಿದು ಮುಂದಕ್ಕೆಳೆದು, ರಕ್ಷಕಭಟನ ಸೊಂಟಕ್ಕೆ ಒಂದು ಗುದ್ದಿ ಕುಳಿತಲ್ಲೇ ಅವನ ಎರಡು ಕಾಲುಗಳನ್ನು ಹಿಡಿದು ಗೊಂಬೆಯನ್ನೆತ್ತಿದಂತೆ ಎತ್ತಿ ಗಿರಿಗಿರಿ ತಿರುಗಿಸಿ ದೂರದಲ್ಲಿ ಇರುವ ನದಿಯಲ್ಲಿ ಬೀಳುವಂತೆ ಬೀಸಿ ಒಗೆದನು.

ಇದನ್ನು ನೋಡಿದ ಕೂಡಲೇ ಉಳಿದ ರಾಜ ಭಟರು "ಅಯ್ಯೋ, ಅಮ್ಮೋ !" ಎಂದು ಕೂಗಿ ಕೊಳ್ಳುತ್ತ, ಕಾಲಿಗೆ ಬಲವಿದ್ದಷ್ಟು ಬೇಗದಿಂದ ಓಡಿ ಹೋಗತೊಡಗಿದರು. ಭಲ್ಲೂಕಕೇತು ಮುಗುಳು ನಗುತ್ತ ಅವರು ಓಡುವುದನ್ನು ನೋಡಿ "ಹೂಂ" ಎಂದು ತಲೆ ಕುಣಿಸಿದನು.

ಓಡಿಹೋದ ಭಟರು ಹಾಹಾಕಾರ ಮಾಡುತ್ತ, ರಾಜನ ಹತ್ತಿರ ಹೋಗಿ ಮೇಲುಸಿರು ಕೀಳುಸಿರು ಬಿಟ್ಟುಕೊಂಡು, ತಮಗಾದ ಅನುಭವವನ್ನು ಮೊರೆ ಯಿಟ್ಟರು. ಅದನ್ನು ಕೇಳಿ ರಾಜನಿಗೆ ಕೋಪವು ಉರಿದುರಿದು ಬರತೊಡಗಿತು, "ಎಲೋ ಕೈಲಾಗದ ರಣಹೇಡಿಗಳೇ ! ಒಬ್ಬ ಕಾಡಿನ ಮೊರಟನನ್ನು ಹಿಡಿದು ತರಲಾಗದ ನೀವೆಲ್ಲ ಏಕೆ ಬದುಕಿರಬೇಕು ? ಛೀ !" ಎಂದನು.

ಆಗ ಮಂತ್ರಿ ಮುಂದೆ ಬಂದು, "ಮಹಾರಾಜಾ, ಅವಸರಪಡಬಾರದು. ಅವನು ಕಾಡುಜಾತಿ ಮನುಷ್ಯನೋ ಅಲ್ಲ ರಾಕ್ಷಸನೋ ನಮಗೆ ಗೊತ್ತಾಗ ಲಿಲ್ಲವಷ್ಟೆ ? ಆ ಜಾಲರಿ ಪಿಂಗಳನು ಮಂತ್ರಗಾರ ನೆಂದು ನಮಗೆ ಗೊತ್ತಿದೆ. ಅವನು ಸಹೋದರರ ಮೋಸಕ್ಕೆ ಒಳಗಾಗಿದ್ದಾನೆ. ಅವನ ಸಂಗತಿ ಸ್ವಲ್ಪ ಯೋಚಿಸಿ ನಾವು ಮುಂದಿನ ಕೆಲಸ ಮಾಡಬೇಕು. ಹೇಗಾದರೂ ನಾವು ಆ ಪಿಂಗಳನನ್ನು ಸಂಧಿಸಿ ಮಾತಾಡುವುದು ಒಳ್ಳೆಯದು" ಎಂದು ಹೇಳಿದನು ವಿನಯದಿಂದ.

"ಅವನು ಎಂಥವನಾದರೂ ನಮ್ಮಂಥ ಮನುಷ್ಯ ನೆಂಬುದು ನಿಜ. ಅಂಥವನು ಅವಂತಿ ನಗರದ ರಾಜನನ್ನೇ ಧಿಕ್ಕರಿಸುವುದೆಂದರೇನು ? ಅವನ ತಲೆ ಕಡಿದು ಕೋಟೆಯ ಬಾಗಿಲಿಗೆ ಕಟ್ಟಿಸಬೇಡವೆ ?" ಎಂದು "ಎಲೋ ಸೇನಾನೀ ! ಎಲ್ಲಿ ಸೇನಾನಿ ?" ಎಂದು ರಾಜನು ಚಪ್ಪಾಳೆ ತಟ್ಟಿದನು.

"ಮಹಾರಾಜಾ !" ಎಂದು ಓಡಿಬಂದನು ಸೇನಾನಾಯಕ.

ಪಿಂಗಳನು ಕಟ್ಟಿದ ಭವನವನ್ನು ನೆಲಸಮ ಮಾಡಿ, ಅಲ್ಲಿರುವವರೆಲ್ಲರನ್ನೂ ಬಂಧಿಸಿ ತರಬೇಕೆಂದು ರಾಜನು ಅವನಿಗೆ ಕಟ್ಟಾಜ್ಞೆ ಕೊಟ್ಟನು.

ಸೇನಾ ನಾಯಕನಿಗೆ ಉಕ್ಕಿದ ಉತ್ಸಾಹಕ್ಕೆ ಹದ್ದಿಲ್ಲ. ಈ ನಡುವೆ ಕೆಲವು ವರ್ಷಗಳಿಂದ ಯುದ್ಧಗಳಿಲ್ಲದೆ ಹೋದುದರಿಂದ ಅವನ ತೋಳುಗಳಿಗೆ ಜಡ ಹಿಡಿ ದಿತ್ತು. ಈ ಆಜ್ಞೆಯಿಂದ ನದೀ ತೀರದಲ್ಲಿರುವ

ಸೊಕ್ಕಿನವರನ್ನೆಲ್ಲ ಹಿಡಿದು ಕಟ್ಟಿ ಹೊರಳಾಡಿಸಿ, ಅವರು ಕಟ್ಟಿದ ಅರಮನೆಯನ್ನು ಧ್ವಂಸ ಮಾಡು ವಂತಹ ಭಲೇ ಕೆಲಸವಿದೆಂದು ಅವನೂ ಅವನ ಸೈನಿಕರೂ ಕುಣಿದಾಡಿದರು. "ಈ ಪಿಂಗಳನಿಗೊಂದು ಚಿಕ್ಕ ಸೈನ್ಯವಿರುತ್ತಿದ್ದರೆ ಇನ್ನೂ ಒಳ್ಳೆಯದಿತ್ತು, ಬಾ ಹಾ ಬಾ ಹೀ, ಮುಷ್ಟಾಮುಷ್ಟೀ ಭಯಂಕರ ಯುದ್ಧ ಮಾಡಬಹುದಿತ್ತು!" ಎಂದುಕೊಂಡರು ಸೈನಿಕರು ಆತುರದಿಂದ.

ಇನ್ನೂರು ಮಂದಿ ಅಶ್ವಿಕರೂ, ಮುನ್ನೂರು ಮಂದಿ ಪದಾತಿಗಳೂ ಆ ಸೇನಾ ನಾಯಕನೊಂದಿಗೆ ಪಿಂಗಳನ ಭವನದ ಕಡೆಗೆ ಹೊರಟರು. ಅವರ ಗರ್ಜನೆಗಳು ಸುತ್ತು ಮುತ್ತೂ ಪ್ರತಿಧ್ವನಿಸಿದುವು.

ದ್ವಾರ ಪ್ರದೇಶದಲ್ಲಿ ಭಲ್ಲೂಕಕೇತು ನಿದ್ದೆಯಲ್ಲಿರು ವವನಂತೆ ನಟಿಸುತ್ತ, ಅರೆಗಣ್ಣಿನಿಂದ ಸೇನೆಗಳ ಬರುವಿಕೆಯನ್ನು ಗಮನಿಸಿಕೊಂಡಿದ್ದನು. ಸೇನಾ ನಾಯಕನು ಅಲ್ಲಿಗೆ ಬಂದು ಈಟಿಯನ್ನು ಅವನ ಕಡೆಗೆ ಗುರಿ ಹಿಡಿದು, "ಏಯ್ ಕಾಡು ಕೋತಿ ಮುಸುಡಾ! ಎಲ್ಲಿದ್ದಾನೆ ಪಿಂಗಳ? ಬೇಗನೇ ಕರೆ, ಏಳು!" ಎಂದನು.

ಭಲ್ಲೂಕಕೇತು ಆಗಲೇ ಎಚ್ಚರಕ್ಕೆ ಬಂದವನಂತೆ ಎದ್ದು ನಿಂತು ಮೈಮುರಿದು, ಸೇನಾ ನಾಯಕನನ್ನು ನೋಡಿ, "ಯಾರದು? ನನ್ನ ನಿದ್ದೆಯನ್ನು ಕೆಡಿಸಿದ ಮಾನವಾಧಮ ನೀನೇ ಏನು?" ಎಂದನು ಕೋಪ ದಿಂದ ಗುರುಗುಟ್ಟುವಂತೆ.

ಆ ಪ್ರಶ್ನೆಯಿಂದ ಸೇನಾ ನಾಯಕನು ಈಟಿಯ ನ್ನೆತ್ತಿ ಕುದುರೆಯ ಮೇಲಿದ್ದಂತೆಯೇ ಕುದುರೆಯನ್ನು ಅವನ ಮೇಲೆ ಹಾರಿಸಿದನು. ಭಲ್ಲೂಕಕೇತು ಸ್ವಲ್ಪ ಮೇಲೆ ಹಾರಿ, ಎರಡೂ ಕೈಗಳಿಂದಲೂ ಸೇನಾ ನಾಯಕನನ್ನು ಬಾಚಿ ಹಿಡಿದು ಒತ್ತಿ ಎತ್ತಿ ಅಮುಕಿ ಕೊಂಡೇ ತನ್ನ ಕಲ್ಲು ಕುರ್ಚಿಯಲ್ಲಿ ಕುಳಿತನು. ಕುದುರೆ ಪಕ್ಕಕ್ಕೆ ಹೊರಳಿ ಬಿದ್ದಿತು.




ಅಪ್ಪಾದ ಕೂಡಲೇ ಸೈನಿಕರೆಲ್ಲರೂ ಬಗೆಬಗೆಯ ಆಯುಧಗಳೊಂದಿಗೆ ಅಲ್ಲಿಗೆ ಓಡಿಬಂದರು. ಆಗಲೇ ಭಲ್ಲೂಕಕೇತು ಚಪ್ಪಾಳೆ ತಟ್ಟಿದನು. ಮರುಕ್ಷಣದಲ್ಲಿ ಭಲ್ಲೂಕಕೇತುವಿನ ಪಿಶಾಚಾನುಚರರು ಕಲ್ಲಿನ ಆಯುಧ ಗಳನ್ನು ಹಿಡಿದುಕೊಂಡು ಹೊರಗೆ ಬಂದರು. ಭಲ್ಲೂಕಕೇತು ಅವರಿಗೆ ರಾಜಭಟರನ್ನು ತೋರಿಸಿ, "ಅವರೆಲ್ಲರನ್ನೂ ಹಿಡಿದು ನಜ್ಜುಗುಜ್ಜು ಮಾಡಿ ಹಾಕಿರಿ!" ಎಂದನು.

ಭಲ್ಲೂಕಕೇತುವಿನ ಅನುಚರರು ಅಶ್ವಿಕರುಗಳ ಮೇಲೆಯೂ ಪದಾತಿಗಳ ಮೇಲೆಯೂ ಬಿದ್ದು ಹೊಡೆದು ಗುದ್ದಿ ಹಿಂಡಿ ಬಿಸುಡುತ್ತ ಬೀಭತ್ಸಗೊಳಿಸಿದರು. ಈ ದೃಶ್ಯವನ್ನು ಭವನದ ಮೂರನೇ ಅಂತಸ್ತಿನಲ್ಲಿ ನೋಡುತ್ತಿದ್ದ ಪಿಂಗಳನು ಕೆಳಗೆ ಬಂದು, ಭಲ್ಲೂಕಕೇತುವಿನ ಕೈಯಲ್ಲಿ ಸಿಕ್ಕಿಕೊಂಡಿದ್ದ ಸೇನಾ ನಾಯಕನಿಗೆ ಕೇಳಿಸುವಂತೆ ಹೀಗೆಂದನು: "ದುರಾಶೆ ಹಿಡಿದ ನಮ್ಮ ರಾಜನು ನನ್ನ ತಾಯಿಯನ್ನು

ರಕ್ಷಿಸದೆ ಕಷ್ಟಪಡಿಸಿದನು. ಆದಕ್ಕಾಗಿ ನಾನು ಈ ಬಗೆಯ ಅಮಾನುಷ ಶಕ್ತಿಗಳನ್ನು ಉಪಯೋಗಿಸ ಬೇಕಾಯಿತು. ಉಳಿದ ವಿಷಯಗಳಲ್ಲಿ ನಾನು ರಾಜನಿಗೆ ವಿಧೇಯನೇ."

ಆಮೇಲೆ ಪಿಂಗಳನ ಆಜ್ಞೆಯಂತೆ ಭಲ್ಲೂಕಕೇತು ಸೇನಾ ನಾಯಕನನ್ನು ಬಿಟ್ಟನು. ಅವನು ಕುಂಟುತ್ತಾ ಅಳಿದುಳಿದ ಸೈನಿಕರೊಂದಿಗೆ ರಾಜನ ಬಳಿಗೆ ಹಿಂದಿರು ಗಿದನು. ನಡೆದ ಸಂಗತಿ ಪೂರಾ ರಾಜನಿಗೆ ಗೊತ್ತಾ ಯಿತು. "ಮಂತ್ರೀ, ಇದು ಬಹಳ ಅವಮಾನಕರ ವಾದ ವಿಷಯ. ಸಾವೋ ಬದುಕೋ, ನಾನೇ ಸ್ವತಃ ಸೈನ್ಯವನ್ನು ನಡೆಸಿ ಆ ಪಿಂಗಳನನ್ನು ಇದಿರಿಸು ತ್ತೇನೆ. ನಾನು ಆ ಯುದ್ಧದಲ್ಲಿ ಸತ್ತರೆ, ನನ್ನ ಏಕಮಾತ್ರ ಕುಮಾರಿಯನ್ನು ನೀನೇ ಕಾಪಾಡಿ, ಯೋಗ್ಯ ವರನೊಂದಿಗೆ ಮದುವೆ ಮಾಡು" ಎಂದನು.

ಮಂತ್ರಿ ತಲೆದೂಗುತ್ತ, "ಪ್ರಭೂ ! ಆ ಪಿಂಗಳನು ಸೇನಾನಿಯೊಂದಿಗೆ ಹೇಳಿದ ಮಾತುಗಳನ್ನು ಆಲೋ ಚಿಸಬೇಕು. ತಾವು ಕೋಪಿಸದಿದ್ದರೆ ನಾನೊಂದು ಮಾತು ಹೇಳುತ್ತೇನೆ" ಎಂದನು.

"ಹೇಳು" ಎಂದನು ರಾಜ.

"ಪಿಂಗಳನು ಒಳ್ಳೆಯ ಗುಣದವನೆಂದು ನಾನು ವಿಚಾರಿಸಿ ತಿಳಿದಿದ್ದೇನೆ. ಯುವಕನೂ ಹೌದು, ಯಾವ ರಾಜಕುಮಾರನಿಗೂ ಸರಿಹೊಂದುವ ಧೀರನೂ ನಿಜ. ಐಶ್ವರ್ಯದಲ್ಲಿ, ಶೌರ್ಯ ಸಾಹಸ ಗಳಲ್ಲಿ ಅವನಿಗೆ ಅವನೇ ಸಾಟಿ. ಆದುದರಿಂದ ರಾಜಕುಮಾರಿಯನ್ನು ಅವನಿಗೇ ಕೊಟ್ಟು ವಿವಾಹ ಮಾಡುವುದರ ಮೂಲಕ ನಿಮಗೂ, ರಾಜ್ಯಕ್ಕೂ ಕ್ಷೇಮವೆಂದು ನನ್ನ ಅಭಿಪ್ರಾಯ" ಎಂದನು.

ರಾಜನು ಸ್ವಲ್ಪ ಆಲೋಚಿಸಿ, "ನಿನ್ನ ಅಭಿಪ್ರಾಯ ನಿಜ, ಒಪ್ಪುತ್ತೇನೆ. ಮಂತ್ರೀ" ಎಂದನು ಸಂತೋಷದಿಂದ.

ಮಂತ್ರಿ ಸರ್ವ ಲಾಂಛನಗಳೊಂದಿಗೆ ಹೋಗಿ, ಪಿಂಗಳನನ್ನೂ, ಅವನ ತಾಯಿಯನ್ನೂ ನೋಡಿ ಮಾತಾಡಿ, ರಾಜನ ಕೋರಿಕೆಯನ್ನು ತಿಳಿಸಿದನು. ರಾಜಕುಮಾರಿಯನ್ನು ಕುರಿತು ಕೇಳಿ ತಿಳಿದಿದ್ದ ಪಿಂಗಳನು ಈ ವಿವಾಹಕ್ಕೆ ಸಂತೋಷದಿಂದ ತನ್ನ ಒಪ್ಪಿಗೆಯನ್ನು ಸೂಚಿಸಿದನು.

ಮುಂದೆ ಕೆಲವೇ ದಿನಗಳಲ್ಲಿ ಮಹಾ ವೈಭವ ದಿಂದ ರಾಜಕುಮಾರಿಯೊಂದಿಗೆ ಪಿಂಗಳನಿಗೆ ಮದುವೆ ಯಾಯಿತು. ಮಹಾ ಮಾಂತ್ರಿಕ ಪದ್ಮಪಾದನು ವಿವಾಹಕ್ಕೆ ಬಂದು ವಧೂವರರಿಗೆ ಆಶೀರ್ವಾದ ಮಾಡಿದನು. ರಾಜನು ಕಾಲಗತಿ ಹೊಂದಿದ ಮೇಲೆ ಪಿಂಗಳನೇ ಅವಂತಿಯ ರಾಜನಾಗಿ, ಪ್ರಜೆಗಳ ಪ್ರೀತಿಗೆ ಪಾತ್ರನಾಗುವಂತೆ ಬಹುಕಾಲ ರಾಜ್ಯವನ್ನು ಪಾಲಿಸಿದನು. (ಮುಗಿಯಿತು)

